## 5 ಆಯುರ್ದಾಯ (ದ್ವಿತೀಯಾವೃತ್ತಿ)

ಆಯುರ್ದಾಯ ವಿಭಾಗ, ಮಾರಕಸ್ಥಾನಗಳು, ಮರಣಹೇತು, ಬಾಲಾರಿಷ್ಟ, ಅರಿಷ್ಟಭಂಗಯೋಗಗಳು, ನಿರ್ಯಾಣರಾಶಿಹೇತು, ನಿರ್ಯಾಣಗ್ರಹ, ಯೋಗಜಾಯು, ಅಲ್ಪಾಯು ಮಧ್ಯಾಯು, ದೀರ್ಘಾಯು, ಪೂರ್ಣಾಯು ಇತ್ಯಾದಿ ಆಯುರ್ದಾಯ ವಿಚಾರ, ಅಪಘಾತ, ಅಪಮೃತ್ಯು ಅಕಾಲಮರಣ, ಆತ್ಮಹತ್ಯೆ, ಕೊಲೆ, ವಿಚಿತ್ರಮರಣಯೋಗ ಇತ್ಯಾದಿ ಮಾದರಿ ಜಾತಕದೊಂದಿಗೆ ವಿವರಿಸಿ ಬರೆದಿರುತ್ತದೆ. ದ್ರೇಕ್ಕಾಣಹೇತು, ಮರಣಕಾಲ, ಮರಣಹೇತು, ಮಾರಕದಶಾಭುಕ್ತಿಗಳು, ಮರಣಭೂಮಿ, ಮಾರಕವಿಚಾರ, ಶವಪರಿಣಾಮ, ಪೂರ್ವಜನ್ಮಜ್ಞಾನ, ಪರಲೋಕಪ್ರಾಪ್ತಿ, ಮೋಕ್ಷಯೋಗ ಇತ್ಯಾದಿ ಆಯುರ್ದಾಯ ವಿಚಾರ ಈ ಗ್ರಂಥವು ಆಧಾರಶ್ಲೋಕ ಮತ್ತು 108 ಮಾದರಿ ಜಾತಕಗಳಿಂದ ವಿವರಿಸಿ ಬರೆದಿರುತ್ತದೆ. ಆಯುರ್ದಾಯ ನಿರ್ಣಯಕ್ಕೆ ಉಪಯುಕ್ತ ಆಗುವಂತ ಪ್ರಶ್ನಮಾರ್ಗ ಗ್ರಂಥದ ಹತ್ತನೇ ಅಧ್ಯಾಯ-ನಿರ್ಯಾಣ ಕಾಲ ಚಿಂತನ ನಿರ್ಯಾಣಗ್ರಹ ಗುಳಿಕ ಮತ್ತು ಲಗ್ನಚಿಂತನ ಇತ್ಯಾದಿ ವಿಚಾರ ಮತ್ತು ಹನ್ನೊಂದನೇ ಅಧ್ಯಾಯ-ನಿರ್ಯಾಣ ಹೇತು, ಗ್ರಹರ ಧಾತ್ವಾದಿಕಾರಕತ್ವ, ರೋಗನಿರ್ಣಯ, ಬಾಧಾಕೃತಹೇತು ಇತ್ಯಾದಿ ಪ್ರಶ್ನವಿಚಾರ ವಿವರಣೆಯಿಂದ ಕೂಡಿದ ಉಪಯುಕ್ತ ಗ್ರಂಥ.

ಪುಟ : 144 ಬೆಲೆ : ರೂ. 40-00

## 9 ದೈವಜ್ಞ ವರಾಹಮಿಹಿರ ಕೃತ ಲಘು ಜಾತಕ

ದೈವಜ್ಞ ವರಾಹಮಿಹಿರಾಚಾರ್ಯ ಕೃತ ಲಘುಜಾತಕ ಗ್ರಂಥವು ಜ್ಯೋತಿಷಶಾಸ್ತ್ರದ ಅಧ್ಯಯನಕ್ಕೆ, ಬೃಹಜ್ಜಾತಕದಂತೆ ಅತ್ಯಂತ ಉಪಯುಕ್ತ ಗ್ರಂಥ ಆಗಿರುತ್ತದೆ. ರಾಶಿಯ ಗುಣಧರ್ಮಗಳು, ಗ್ರಹಸ್ವರೂಪ, ಕಾರಕತ್ವ, ಗ್ರಹಮಿತ್ರತ್ವಾದಿ, ಆಧಾನಕುಂದಿಲಿ, ಸ್ತ್ರೀ-ಪುರುಷ-ಯಮಳಾದಿ ಜನನ, ಜನ್ಮಕಾಲ ಲಕ್ಷಣಾದಿ, ಸದ್ಯೋರಿಷ್ಟ, ಅರಿಷ್ಟಭಂಗ, ಆಯುರ್ದಾಯ, ದಶಾಂತರ್ದಶಾ, ಅಷ್ಟಕವರ್ಗ, ಚಾಂದ್ರಯೋಗ, ಪ್ರವ್ರಜ್ಯಾಯೋಗ, ಭಾವಸ್ಥಿತ ಗ್ರಹಫಲ, ರಾಜಯೋಗ, ಆಶ್ರಯಯೋಗ, ದಲಯೋಗ, ಆಕೃತಿಯೋಗ, ಸಂಖ್ಯಾಯೋಗ ಮತ್ತು ಯೋಗಜಫಲ, ಸ್ತ್ರೀ ಜಾತಕವಿಚಾರ, ನಿರ್ಯಾಣಾಧ್ಯಾಯ ಮತ್ತು ನಷ್ಟಜಾತಕ ಶೋಧನೆ ಇತ್ಯಾದಿ ವಿಚಾರ ವಿವರಣೆಯಿಂದ ಕೂಡಿರುತ್ತದೆ.

ಪರಾಶರಮುನಿ ಪ್ರಣೀತ ಉಡುದಾಯ ಪ್ರದೀಪ ಅಥವಾ ಲಘು ಪರಾಶರೀ ಗ್ರಂಥದ ಮೂಲಶ್ಲೋಕ ಅನುವಾದವನ್ನು ಮತ್ತು ದ್ವಾದಶಲಗ್ನದ ಫಲಾಫಲಚಿಂತನೆಗೆ ಜಾತಕ ಚಂದ್ರಿಕಾ ಗ್ರಂಥದಲ್ಲಿ ಹೇಳಿದ ಗ್ರಹರ ಶುಭಾಶುಭತ್ವ ವಿಚಾರಾದಿಗಳಿಂದ ಕೂಡಿದ ಉಪಯುಕ್ತ ಜ್ಯೋತಿಷಗ್ರಂಥ.

ಪುಟ : 108 ಬೆಲೆ : ರೂ. 27-00

ಜ್ಯೋತಿಷ ಕಾಮಧೇನು ಗ್ರಂಥಮಾಲಾ - 4

# ಗುಳಿಕ [ಮಾಂದಿ] ಉಪಗ್ರಹರು

ಸಂಗ್ರಹ - ಅನುವಾದ
ಗ್ರಂಥಕರ್ತರು


**ಬಿ. ಜಿ. ಆಚಾರ್ಯ**



ತೃತೀಯಾವೃತ್ತಿ
1997

ಪ್ರಕಾಶಕರು
ಗ ಜಾ ನ ನ ಪ್ರ ಕಾ ಶ ನ
ಗಣಪತಿ ಹೈಸ್ಕೂಲ್ ಕ್ರೋಸ್ ರೋಡ್
ಕಾಮಧೇನು ಏಜನ್ಸಿ
ಮಂಗಳೂರು - 575 001

ಬೆಲೆ ರೂ. 48-00

# GULIKA (MANDI) – UPAGRAHARU

An Astrological Book, with selected Slokas from Phaladeepika, Parashara Hora, Jataka Parijata and Prasna Marga etc. translated in Kannada,
P. P. 8 +124



**Price Rs. 48–00**

First Edition – 1972
Second Edition – 1988
Third Edition – 1997

Publishers: **GAJANANA PRAKASHAN**
KAMADHENU AGENCY
G. H. S. Cross Road,
Mangalore – 575 001.

Printers: **CODEWORD PROCESS and PRINTERS**
Falnir, Mangalore - 575 001.

# ಮುನ್ನುಡಿ

ಜನ್ಮ ಜಾತಕದ ಫಲಚಿಂತನೆಯಲ್ಲಿ ಗ್ರಹಸ್ಥಿತಿಯಿಂದ ಲಭಿಸುವ ಶುಭಾಶುಭಫಲ, ದಶಾಫಲ, ಯೋಗಜಫಲ, ಭಾವಫಲ ಇತ್ಯಾದಿ ಪ್ರಾಪ್ತಿ ಕಾಲದಲ್ಲಿ ಕೆಲವೊಮ್ಮೆ ಅಗೋಚರ ಕಾರಣಗಳಿಂದ ವಿಘ್ನಗಳು ಉಂಟಾಗುವುದು ಕಂಡುಬರುತ್ತದೆ, ಫಲಾಫಲಗಳ ನಾಶ ಅಥವಾ ಪ್ರಾಪ್ತಿ ಕಾಲದ ವಿಘ್ನತೆಗೆ ಗುಳಿಕನ ಪ್ರಭಾವವು ಕಾರಣವಾಗಿರುತ್ತದೆ.

ಪ್ರಶ್ನಶಾಸ್ತ್ರದಲ್ಲಿ ಗುಳಿಕನಿಗೆ ಪ್ರಾಮುಖ್ಯ ಹಾಗೂ ತನ್ನದೇ ಆದ ವಿಶಿಷ್ಟ ಸ್ಥಾನ ಇದೆ. ಕೃತ್ರಿಮ, ದುಷ್ಟಶಕ್ತಿಗಳ ಪೀಡೆ, ರೋಗಹೇತು ಮತ್ತು ನಿವಾರಣೆ ಅಥವಾ ಮರಣಕಾಲ ಇತ್ಯಾದಿ ಪ್ರಶ್ನಕಾಲದ ಗುಳಿಕಸ್ಥಿತಿಯಿಂದ ನಿರ್ಣಯಿಸಿರುತ್ತಾರೆ.

ಗುಳಿಕ ಅಥವಾ ಮಾಂದಿ ಶೋಧನೆ, ಗುಳಿಕನ ಭಾವಸ್ಥಿತ ಮತ್ತು ಯುತಿಫಲ ಹಾಗೂ ಇತರ ಉಪಗ್ರಹರ ಫಲಾಫಲಗಳನ್ನು, ಪ್ರಾಚೀನ ಗ್ರಂಥಗಳ ಆಧಾರದಿಂದ ಹಾಗೂ ಅನುಭವದಲ್ಲಿ ಕಂಡುಬಂದ ಫಲಗಳಿಂದ ವಿವರಿಸಿ ಈ ಚಿಕ್ಕ ಗ್ರಂಥದಲ್ಲಿ ಬರೆದಿರುತ್ತದೆ.

ಈ ಗ್ರಂಥದಲ್ಲಿ ನ್ಯೂನಾಧಿಕ್ಯಗಳು ಕಂಡುಬಂದಲ್ಲಿ ಇದನ್ನು ವಾಚಕರು ಕ್ಷಮಿಸುವರೆಂದು ಆಶಿಸುತ್ತೇನೆ. ಈ ಕೃತಿಯನ್ನು ವಿದ್ವಜ್ಜನರು, ಸಾಧು ಸಾಹಿತಿಗಳು ಮತ್ತು ಸತ್ಯಾನ್ವೇಷಕ ದೈವಜ್ಞರು ಸಫಲಗೊಳಿಸುವರೆಂದು ನಾನು ನಂಬುತ್ತೇನೆ. ಈ ಚಿಕ್ಕ ಗ್ರಂಥವು ವಿದ್ಯಾರ್ಥಿಗಳಿಗೆ, ವಾಚಕರಿಗೆ ಮತ್ತು ಗ್ರಂಥಾಲಯಗಳಿಗೆ ಉಪಯುಕ್ತವಾಗಿ ಲೋಕಪ್ರೇಮವನ್ನು ಗಳಿಸಲಿ ಎಂದು ಹಾರೈಸುವ,

12-9-1972
ಮಂಗಳೂರು,
ವಿನಾಯಕ ಚತುರ್ಥಿ.

ತಮ್ಮೆಲ್ಲರ ಹಿತೇಚ್ಛು,

**ಬಿ. ಜಿ. ಆಚಾರ್ಯ**

# ದ್ವಿತೀಯ ಆವೃತ್ತಿಯ ಮುನ್ನುಡಿ

ಗುಳಿಕ (ಮಾಂದಿ) ಮತ್ತು ಉಪಗ್ರಹ ವಿಚಾರ ಗ್ರಂಥದ ತಿದ್ದಿದ ಈ ದ್ವಿತೀಯಾವೃತ್ತಿಯು ವಿದ್ಯಾರ್ಥಿಗಳಿಗೆ ಉಪಯುಕ್ತ ಆಗಿರುತ್ತದೆ. ಪ್ರಶ್ನ ಶಾಸ್ತ್ರದ ಅಭ್ಯಾಸಕ್ಕೆ ಉಪಯುಕ್ತ ಆಗುವಂತೆ ''ಗುಳಿಕ-ರೋಗಪ್ರಶ್ನೆ'' ಎಂಬ ಅಧ್ಯಾಯವನ್ನು ಈ ಆವೃತ್ತಿಯಲ್ಲಿ ಸೇರಿಸಿರುತ್ತೇವೆ.

ಫಲದೀಪಿಕಾ, ಪ್ರಶ್ನಮಾರ್ಗ, ಜಾತಕಪಾರಿಜಾತ, ಸರ್ವಾರ್ಥ ಚಿಂತಾಮಣಿ, ಬೃಹತ್ ಪರಾಶರಹೋರಾ ಮೊದಲಾದ ಪ್ರಾಚೀನ ಗ್ರಂಥಕಾರರ ಮತವನ್ನು ಆಧಾರವಾಗಿ ಟಿಪ್ಪಣಿಸಹಿತ ಇಲ್ಲಿ ಬರೆದಿರುತ್ತದೆ.

ಈ ಗ್ರಂಥಾನುವಾದದಲ್ಲಿ ನ್ಯೂನಾಧಿಕ್ಯಗಳು ಕಂಡು ಬಂದಲ್ಲಿ, ಮುಂದಿನ ಆವೃತ್ತಿಯಲ್ಲಿ ಸರಿಪಡಿಸಲು ತಿಳಿಸಬೇಕಾಗಿ ವಾಚಕರಲ್ಲಿ ಪ್ರಾರ್ಥಿಸುತ್ತೇವೆ.

ಈ ಚಿಕ್ಕಗ್ರಂಥವು ವಿದ್ಯಾರ್ಥಿಗಳಿಗೆ, ವಾಚಕರಿಗೆ ಮತ್ತು ಗ್ರಂಥಾಲಯಗಳಿಗೆ ಉಪಯುಕ್ತವಾಗಿ ಲೋಕಪ್ರೇಮವನ್ನು ಗಳಿಸಲಿ ಎಂದು ಹಾರೈಸುವ,

25-7-1988
ಆಷಾಢ ಏಕಾದಶಿ,
ಮಂಗಳೂರು.

ತಮ್ಮೆಲ್ಲರ ಹಿತೇಚ್ಛು
**ಬಿ. ಜಿ. ಆಚಾರ್ಯ**

## —:: ಅನುಕ್ರಮಣಿಕೆ ::—

|| ಶ್ರೀ ಗಣೇಶಾಯ ನಮಃ ||

# ಪೀಠಿಕೆ

**ನಮಾಮಿ ಮಾಂದಿಂ ಯಮಕಂಟಕಾಖ್ಯಮರ್ಧಪ್ರಹಾರಂ ಭುವಿ ಕಾಲಸಂಜ್ಞಮ್ |ಧೂಮವ್ಯತೀಪಾತ ಪರಿಧ್ಯಭಿಖ್ಯಾ-ನುಪಗ್ರಹಾನಿಂದ್ರಧನುಶ್ಚ ಕೇತೂನ್ || ೧ || ಫ. ದೀ. ||**

ಪ್ರಥಮದಲ್ಲಿ ನವಗ್ರಹರ ಉಪಗ್ರಹರಾದ 1. ಮಾಂದಿ (ಗುಳಿಕ). 2. ಯಮಕಂಟಕ, 3. ಅರ್ಧಪ್ರಹಾರ, 4. ಕಾಲ, 5. ಧೂಮ, 6. ವ್ಯತೀಪಾತ, 7. ಪರಿಧಿ, 8. ಇಂದ್ರಧನು, (ಕೋದಂಡ) ಮತ್ತು 9. ಉಪಕೇತು (ಕೇತು), ಇವರನ್ನು ಮನಸಾ ವಂದಿಸುತ್ತೇನೆ.

ಜ್ಯೋತಿಷಶಾಸ್ತ್ರದಲ್ಲಿ ರವಿಯಿಂದ ಶನಿಯ ವರೆಗಿನ ಸಪ್ತಗ್ರಹರು ಮತ್ತು ರಾಹು-ಕೇತುಗಳನ್ನು ಆಧರಿಸಿ ಫಲಾಫಲಗಳನ್ನು ನಿರ್ಣಯಿಸುತ್ತಾರೆ. ಪ್ರತಿಯೊಂದು ಗ್ರಹಕ್ಕೆ ಒಂದು ಉಪಗ್ರಹವಿದೆ, ಈ ಉಪಗ್ರಹರಲ್ಲಿ ಶನಿಯ ಪುತ್ರ ಹಾಗೂ ಉಪಗ್ರಹನಾದ ಗುಳಿಕ ಅಥವಾ ಮಾಂದಿಯ ಪ್ರಭಾವವು ಜನ್ಮ ಜಾತಕದಲ್ಲಿ ಅಧಿಕವಾಗಿ ಕಂಡುಬರುತ್ತದೆ. ಗುಳಿಕಸ್ಥಿತ ಮತ್ತು ದೃಷ್ಟಭಾವದ ಮೇಲೆ ಗುಳಿಕನ ಶುಭಾಶುಭ ಫಲಗಳು ವಿಶೇಷವಾಗಿ ಕಂಡು ಬರುತ್ತದೆ.

ಗುಳಿಕಸ್ಥಿತ ರಾಶ್ಯಾಧಿಪತಿಯು ನಿರ್ಬಲನಾದರೆ ಅವನ ದಶಾಕಾಲದಲ್ಲಿ ಸಂಕಷ್ಟಗಳು, ಅಪಕೀರ್ತಿ, ಸ್ಥಾನಚ್ಯುತಿ, ಧನನಾಶ, ರೋಗಪೀಡೆ, ಮಂದತ್ವ ಇತ್ಯಾದಿ ಸಂಭವಿಸುವುದು ಕಂಡುಬರುತ್ತದೆ. ಮಾಂದಿ ಅಥವಾ ಗುಳಿಕನು ಪ್ರೇತಬಾಧೆ, ಕೃತ್ರಿಮದೋಷ, ಅಘಘಾತ, ಅಪಮೃತ್ಯು, ಅಕಸ್ಮಾತ್ ಘಟನೆ, ಮತ್ತು ಸಕಲ ಧರ್ಮಕರ್ಮಗಳಲ್ಲಿ ವಿಘ್ನಗಳನ್ನು ನೀಡುವುದು ಕಂಡುಬರುತ್ತದೆ. ಸಕಲ ಜೀವಿಗಳ ಅಂತ್ಯಕಾಲ ಸೂಚಕನಾದ ಗುಳಿಕನ ಪ್ರಭಾವವು ಜನ್ಮ ಜಾತಕದಲ್ಲಿ ಹಾಗೂ ಪ್ರಶ್ನಶಾಸ್ತ್ರದಲ್ಲಿ ವಿಶಿಷ್ಟವಾಗಿ ಕಂಡುಬರುತ್ತದೆ.

**ಸರ್ವೇಷಾಮಪಿ ಪಾಪಾನಾಂ ಮಾಂದಿರ್ದೋಷಪ್ರದೋಽಧಿಕವ್ |**
**ಸೋತಿ ದೋಷಕರೋ ಯೋಗದೃಗ್ವರ್ಗ ವಶತಃ ಶನೇಃ || ೨ || ಪ್ರಶ್ನಮಾರ್ಗ ||**

ಸಕಲ ಪಾಪಗ್ರಹರ ದೋಷಗಳಲ್ಲಿ ಮಾಂದಿದೋಷವು ಪ್ರಬಲವಾಗಿರುತ್ತದೆ. ಮಾಂದಿಯು ಶನಿಯ ದೃಷ್ಟಿ, ಯುತಿ ಅಥವಾ ನವಾಂಶಾದಿ ವರ್ಗಗಳಲ್ಲಿ ಇದ್ದಾಗ ಮಾಂದಿದೋಷವು ಅತ್ಯಂತ ಪ್ರಬಲ ಆಗುತ್ತದೆ.

ಇತರ ಗ್ರಹರ ಉಪಗ್ರಹರಾದ ಕಾಲ, ಪರಿಧಿ ಅಥವಾ ಪರಿವೇಷ, ಧೂಮ, ಅರ್ಧಪ್ರಹಾರ, ಇಂದ್ರಚಾಪ ಅಥವಾ ಕೋದಂಡ, ಪಾತ ಅಥವಾ ವ್ಯತೀಪಾತ, ಕೇತು ಅಥವಾ ಉಪಕೇತು, ಇವರು ಕ್ರಮವಾಗಿ ರವಿ, ಚಂದ್ರ, ಕುಜ, ಬುಧ, ಶುಕ್ರ, ರಾಹು ಮತ್ತು ಕೇತುವಿನಂತೆ ಸಾಮಾನ್ಯವಾಗಿ ಶುಭಾಶುಭಫಲಗಳನ್ನು ನೀಡುತ್ತಾರೆ.

ಗುರುವಿನ ಉಪಗ್ರಹನಾದ ಯಮಕಂಟಕನು ಗುರುವಿನಂತೆ ಶುಭಫಲಗಳನ್ನು ನೀಡುತ್ತಾನೆ.

ಉಪಗ್ರಹರನ್ನು ಗಣಿತರೀತ್ಯಾ ಕಂಡುಹಿಡಿಯುವ ವಿಧಾನ, ಭಾವಸ್ಥಿತ ಉಪಗ್ರಹರು ಸೂಚಿಸುವ ಶುಭಾಶುಭ ಫಲಗಳನ್ನು ಈ ಚಿಕ್ಕಗ್ರಂಥದಲ್ಲಿ ಪ್ರಾಚೀನ ಗ್ರಂಥಗಳ ಆಧಾರದಿಂದ ಮತ್ತು ಅನುಭವಿಸಿದ್ದ ಫಲಗಳನ್ನು ಕೂಡಾ ಬರೆದಿರುತ್ತದೆ.

## ೨. ಉಪಗ್ರಹರು

**ಕ್ರಮಶ: ಕಾಲಪರಿಧಿ ಧೂಮಾರ್ಧಪ್ರಹರಾಹ್ವಯಾ: । ( ಜಾ. ಪಾ. )**
**ಯಮಕಂಟಕ ಕೋದಂಡ ಮಾಂದಿ ಪಾತೋಪಕೇತವ: ॥ ೩ ॥**

ನವಗ್ರಹರ ಉಪಗ್ರಹರನ್ನು ಕ್ರಮವಾಗಿ ಇಲ್ಲಿ ಬರೆದಿರುತ್ತದೆ. ಇವರನ್ನು ಅಪ್ರಕಾಶಕ ಗ್ರಹರೆಂದು ಕೂಡಾ ಕರೆಯುತ್ತಾರೆ.

| | ಗ್ರಹ | ಉಪಗ್ರಹ |
|---|---|---|
| 1. | ರವಿ | ಕಾಲ |
| 2. | ಚಂದ್ರ | ಪರಿಧಿ ( ಪರಿವೇಷ) |
| 3. | ಕುಜ | ಧೂಮ |
| 4. | ಬುಧ | ಅರ್ಧಪ್ರಹಾರ |

| | | |
|---|---|---|
| 5. | ಗುರು | ಯಮಕಂಟಕ |
| 6. | ಶುಕ್ರ | ಇಂದ್ರಚಾಪ(ಕೋದಂಡ, ಕಾರ್ಮುಕ) |
| 7. | ಶನಿ | ಗುಳಿಕ (ಮಾಂದಿ) |
| 8. | ರಾಹು | ಪಾತ (ವ್ಯತೀಪಾತ) |
| 9. | ಕೇತು | ಉಪಕೇತು |

**ದೋಷಪ್ರದಾನೇ ಗುಲಿಕೋ ಬಲೀಯಾನ್ ಶುಭಪ್ರದಾನೇ ಯಮಕಂಟಕಃ ಸ್ಯಾತ್ । ಅನ್ಯೇ ಚ ಸರ್ವೇ ವ್ಯಸನಪ್ರದಾನೇ ಮಾಂದ್ಯುಕ್ತ ವೀರ್ಯಾರ್ಧ ಬಲಾನ್ವಿತಾಃ ಸ್ಯುಃ ॥ ೪ ॥**

ಉಪಗ್ರಹರಲ್ಲಿ ಗುಳಿಕನು ಅಧಿಕ ದೋಷಕಾರಕನು ಆಗಿರುತ್ತಾನೆ. ಯಮಕಂಟಕನು ಉಪಗ್ರಹರಲ್ಲಿ ಶುಭಫಲ ನೀಡುವುದರಲ್ಲಿ ಪ್ರಧಾನನು ಆಗಿರುತ್ತಾನೆ. ಇತರ ಉಪಗ್ರಹರು ನಿರ್ಬಲವಾದ ದೋಷಗಳನ್ನು ಉಂಟುಮಾಡುತ್ತಾರೆ.

**ಕಾಲಸ್ತು ರಾಹುರ್ಗುಲಿಕಸ್ತು ಮೃತ್ಯುರ್ಜೀವಾತುಕಃ ಸ್ಯಾದ್ಯಮ ಕಂಟಕೋಽಪಿ। ಅರ್ಧಪ್ರಹಾರಃ ಶುಭದಃ ಶುಭಾಂಕಯುಕ್ತೋಽನ್ಯಥಾ ಚೇದಶುಭಂ ವಿದಧ್ಯಾತ್ ॥ ೫ ॥ ಫ. ದೀ ॥**

ರವಿಯ ಉಪಗ್ರಹನಾದ ಕಾಲನು ರಾಹುವಿನಂತೆ ಫಲಗಳನ್ನು ನೀಡುತ್ತಾನೆ. ಗುಳಿಕನು ಮರಣಕಾಲ ಸೂಚಕನು, ಯಮಕಂಟಕನು ರಕ್ಷಕನು, ಪೋಷಕನು, ಆಗಿರುತ್ತಾನೆ. ಅರ್ಧಪ್ರಹಾರನು ಅಷ್ಟಕವರ್ಗದಲ್ಲಿ ಹೆಚ್ಚು ಬಿಂದುಗಳು ಇರುವ ರಾಶಿಯಲ್ಲಿ ಇದ್ದರೆ ಶುಭಫಲಗಳನ್ನು ಅನ್ಯಥಾ ಅಶುಭಫಲಗಳನ್ನು ನೀಡುತ್ತಾನೆ.

## ೩. ಗುಳಿಕ ಸ್ವರೂಪ

**ಅಥಗುಲಿಕಃ ಕ್ರೂರತಮಃ ಶನೈಶ್ಚರಸ್ಯಾತ್ಮಜಃ ಖಲಃ ಪಾಪಃ । ಸರ್ಪಾಕೃತಿರತ್ಯುಗ್ರೋ ನಿಗದ್ಯತೇ ಮೃತ್ಯುರಖಿಲ ಸಂಹಾರೀ ॥ ನೀಲಾಂಜನ ಸಂಕಾಶೋ ರಕ್ತಾಕ್ಷೋ ವಿಷಮ ಭೀಷಣೋ ದೀರ್ಘಃ । ಪಂಚಾಸ್ಯಃ ಪೃಥುದಂಷ್ಟ್ರೋ ಭಯಂಕರಃ ಸರ್ವದಾ ಗುಲಿಕಃ ॥ ೬ ॥**

ಶನಿಯ ಪುತ್ರನಾದ ಗುಳಿಕನು (ಮಾಂದಿ) ಕ್ರೂರ ಸ್ವಭಾವದವನು, ತಮೋಗುಣ ಉಳ್ಳವನು, ದುಷ್ಟನು, ಪಾಪಿಯು. ಸರ್ಪದಂತೆ ಆಕೃತಿ ಉಳ್ಳವನು, ಅತ್ಯಂತ ಉಗ್ರನು, ಮೃತ್ಯುವನ್ನು ನೀಡುವವನು, ಸಕಲವಸ್ತುಗಳನ್ನು ನಾಶ ಮಾಡುವವನು, ನೀಲವರ್ಣ, ರಕ್ತದಂತೆ ಕೆಂಪು ಕಣ್ಣುಗಳು, ವಿಷಮನು, ಭೀಷಣನು, ದೀರ್ಘವಾದ ಶರೀರ ಉಳ್ಳವನು, ಐದು ಮುಖಗಳಿಂದ ಕೂಡಿದವನು, ಅಗಲವಾದ ಹಲ್ಲುಗಳು ಉಳ್ಳವನು, ಸದಾಕಾಲವೂ ಭಯಂಕರವಾಗಿ ಕಾಣುವವನು ಆಗಿರುತ್ತಾನೆ.

## ೪. ಮುಹೂರ್ತದಲ್ಲಿ ತ್ಯಾಜ್ಯವಾದ ಗುಳಿಕಕಾಲ

**ರವಿವಾರಾದಿಶನ್ಯಂತಂ ಗುಲಿಕಾದಿ ನಿರೂಪ್ಯತೇ ।**
**ದಿವಸಾನಷ್ಟಧಾ ಭಕ್ತ್ವಾ ವಾರೇಶಾದ್ ಗಣಯೇತ್ ಕ್ರಮಾತ್ ॥ ೭ ॥**
**॥ ಪರಾಶರ ॥**

ರವಿವಾರದಿಂದ ಶನಿವಾರದ ತನಕ ಗುಳಿಕಾದಿ ಕಾಲವನ್ನು ನಿರ್ಣಯಿಸಲು ದಿನಮಾನವನ್ನು ಎಂಟು ಭಾಗಗಳನ್ನಾಗಿ ಮಾಡಬೇಕು. ಮೊದಲಿನ ಭಾಗಕ್ಕೆ ಆ ದಿನನಾಥನೇ ಅಧಿಪತಿ. ಅನಂತರದ ಭಾಗಗಳಿಗೆ ಅನುಕ್ರಮವಾಗಿ ಇತರ ಗ್ರಹರು ಅಧಿಪತಿಗಳು ಆಗುತ್ತಾರೆ. ಎಂಟನೇ ಭಾಗಕ್ಕೆ ಅಧಿಪತಿ ಇಲ್ಲದ್ದರಿಂದ ಇದು ನಿರೀಶಭಾಗ ಆಗುತ್ತದೆ.

**ಅಷ್ಟಮಾಂಶೋ ನಿರೀಶಃಸ್ಯಾತ್ ಶ್ಯನ್ಯಂಶೋ ಗುಳಿಕಃ ಸ್ಮೃತಃ ।**
**ರಾತ್ರಿಮಪ್ಯಷ್ಟಧಾ ಕೃತ್ವಾ ವಾರೇಶಾತ್ ಪಂಚಮಾದಿತಃ ॥ ೮ ॥**
**ಗಣಯೇದಷ್ಟಮಃ ಖಂಡೋ ನಿಷ್ಪತಿಃ ಪರಿಕೀರ್ತಿತಃ ॥ ಪರಾಶರ ॥**

ದಿನಮಾನದ ಅಷ್ಟಮಾಂಶದಲ್ಲಿ ಶನಿಯ ಭಾಗವನ್ನು ಗುಳಿಕಕಾಲ ಎಂದು ಕರೆಯುತ್ತಾರೆ. ಅದೇ ರೀತಿಯಲ್ಲಿ ರಾತ್ರೆ ಭಾಗವನ್ನು ಎಂಟು ಭಾಗಗಳನ್ನಾಗಿ ಮಾಡಿ ಮೊದಲಿನ ಏಳು ಭಾಗಗಳಿಗೆ ದಿನನಾಥನ ಪಂಚಮನಾಥನಿಂದ ಮೊದಲುಗೊಂಡು ಅನುಕ್ರಮವಾಗಿ ಅಧಿಪತಿಗಳನ್ನಾಗಿ ನಿರ್ಣಯಿಸಬೇಕು, ದಿನಮಾನದಂತೆ ರಾತ್ರಿಮಾನದ ಕೊನೆಯ ಅಷ್ಟಮಾಂಶವು ನಿರೀಶಭಾಗ ಆಗುತ್ತದೆ.

**ಶನ್ಯಂಶೋ ಗುಲಿಕಃ ಪ್ರೋಕ್ತೋ ರವ್ಯಂಶಃ ಕಾಲಸಂಜ್ಞಕಃ ॥ ೯ ॥**
**ಭೌಮಾಂಶೋ ಮೃತ್ಯುರಾದಿಷ್ಟೋ ಗುರ್ವಂಶೋ ಯಮಕಂಟಕಃ ।**
**ಸೌಮ್ಯಾಂಶೋರ್ಧ ಪ್ರಹಾರಕಃ ಸ್ವಸ್ವದೇಶೋದ್ ಭವ: ಸ್ಫುಟಃ ॥ ೧೦ ॥**

ದಿನ ಅಥವಾ ರಾತ್ರೆಮಾನದ ಅಷ್ಟಮಾಂಶಗಳಲ್ಲಿ ಶನಿಯ ಭಾಗಕ್ಕೆ ಗುಳಿಕಕಾಲ, ರವಿಯ ಭಾಗಕ್ಕೆ ಕಾಲ, ಕುಜನ ಭಾಗಕ್ಕೆ ಮೃತ್ಯು, ಬುಧನ ಭಾಗಕ್ಕೆ ಅರ್ಧಪ್ರಹಾರ, ಗುರುವಿನ ಭಾಗಕ್ಕೆ ಯಮಕಂಟಕ ಎಂದು ಕರೆಯುತ್ತಾರೆ. ಆಯಾ ದೇಶದ ದಿನಮಾನಕ್ಕೆ ಅನುಗುಣವಾಗಿ ಈ ಅಷ್ಟಮಾಂಶಗಳನ್ನು ಸಂಸ್ಕರಿಸಿ ಆಯಾ ಗ್ರಹರ ಕಾಲಗಳನ್ನು ತಿಳಿಯಬೇಕು.

**ಗುಲಿಕೋ ನಾಡಿಕಾ ಮಾತ್ರಸ್ಥಾಯೀ ತ್ಯಾಜ್ಯಸ್ಸುಯತ್ನತಃ ।**
**ಅತಸ್ತದುದಯೇ ಕರ್ಮಕೃತಂ ಸರ್ವಂ ವಿನಶ್ಯತಿ ॥ ೧೧ ॥**

ಶುಭ ಸಮಾರಂಭ ಕಾಲದಲ್ಲಿ ಗುಳಿಕಕಾಲವನ್ನು ತ್ಯಜಿಸಬೇಕು. ಗುಳಿಕ ಕಾಲದಲ್ಲಿ ಮಾಡಿದ ಶುಭಕಾರ್ಯಗಳು ನಿಷ್ಫಲ ಹೊಂದುತ್ತವೆ.

## ದಿನ ಮತ್ತು ರಾತ್ರೆಮಾನ 30 ಘಟಿಗಳಿರುವಾಗ ಗುಳಿಕಕಾಲ.

| ವಾರ | ರವಿ | ಚಂದ್ರ | ಕುಜ |
|---|---|---|---|
| ಘಟಿ ಹಗಲು | 22 1/2-261/4 | 18 3/4-22 1/2 | 15-18 3/4 |
| ರಾತ್ರೆ | 7 1/2-11 1/4 | 3 3/4-7 1/2 | 0-3 3/4 |

| ಬುಧ | ಗುರು | ಶುಕ್ರ | ಶನಿ |
|---|---|---|---|
| 11 1/4-15 | 7 1/2-11 1/4 | 3 3/4-7 1/2 | 0-3 3/4 |
| 22 1/2-26 1/4 | 18 3/4-22 1/2 | 15-18 3/4 | 11 1/4-15 |

# ೫. ಮಾಂದಿ ಅಥವಾ ಗುಳಿಕ
## ( ಶನಿಯ ಉಪಗ್ರಹ )

ನವಗ್ರಹರ ಉಪಗ್ರಹರಲ್ಲಿ ಶನಿಯ ಉಪಗ್ರಹನಾದ ಮಾಂದಿ ಅಥವಾ ಗುಳಿಕನ ವರ್ಚಸ್ಸು ಜನ್ಮಜಾತಕದಲ್ಲಿ ಅಧಿಕವಾಗಿ ಕಂಡುಬರುತ್ತದೆ. ಜನ್ಮ ಜಾತಕದಲ್ಲಿ ಶನಿಯು ಮರಣವನ್ನು ಸೂಚಿಸುವುದಾದರೆ ಶನಿಯ ಪುತ್ರನಾದ ಮಾಂದಿಯು ಮರಣ ಕಾಲವನ್ನು ಸೂಚಿಸುತ್ತಾನೆ.

ಮರಣಕಾಲ ಸೂಚಕನಾದ ಗುಳಿಕ ಅಥವಾ ಮಾಂದಿಯನ್ನು ಪ್ರಾಚೀನ ಮುನಿಗಳು ಶನಿಯ ಪುತ್ರನೆಂದು ಹೇಳಿರುತ್ತಾರೆ. ಇವನು ದೋಷಪ್ರದನಾಗಿ ಶುಭಫಲ ಪ್ರಾಪ್ತಿಕಾಲದಲ್ಲಿ ವಿಘ್ನಗಳನ್ನು ಉಂಟು ಮಾಡುವುದು ಕಂಡು ಬರುತ್ತದೆ. ದೀರ್ಘವಾದ ಶರೀರ, ಸರ್ಪದಂತೆ ಆಕೃತಿ, ಐದು ಮುಖಗಳು, ಅಗಲವಾದ ಹಲ್ಲುಗಳು, ನೀಲವರ್ಣ, ರಕ್ತದಂತೆ ಕೆಂಪಾದ ಕಣ್ಣುಗಳುಳ್ಳ ಗುಳಿಕನು ಯಾವಾಗಲೂ ಭಯಂಕರವಾಗಿ ಕಾಣುತ್ತಾನೆ. ಗುಳಿಕನು ತಮೋ ಗುಣ ಉಳ್ಳವನು, ದುಷ್ಟ ಸ್ವಭಾವದವನು, ಅತ್ಯಂತ ಉಗ್ರನು, ಕ್ರೂರ ಕಾರ್ಯಗಳಲ್ಲಿ ನಿರತನು, ಸಕಲ ವಸ್ತುಗಳ ನಾಶಕ್ಕೆ ಕಾರಣೀಭೂತನು, ಅಕಾಲ ಮರಣ ಅಥವಾ ಅಪಮೃತ್ಯು ಸೂಚಕನು, ಅದೃಶ್ಯ ಶಕ್ತಿಗಳಪ್ರಭಾವ, ಪ್ರೇತಬಾಧೆ, ಇತ್ಯಾದಿ ಸೂಚಿಸುತ್ತಾನೆ.

ಗುಳಿಕನು ಲಗ್ನದಲ್ಲಿ ಮಾನಸಿಕ ವ್ಯಥೆ, ದ್ವಿತೀಯದಲ್ಲಿ ಆರ್ಥಿಕ ಸಂಕಷ್ಟಗಳು, ತೃತೀಯದಲ್ಲಿ ಭಯ, ಚತುರ್ಥದಲ್ಲಿ ಗೃಹಕಲಹ, ಪಂಚಮದಲ್ಲಿ ಸಂತಾನ ಚಿಂತೆ, ಷಷ್ಠದಲ್ಲಿ ಸ್ವಜನರೊಂದಿಗೆ ವೈರತ್ವ, ಸಪ್ತಮದಲ್ಲಿ ಕಲಹ, ಅಷ್ಟಮದಲ್ಲಿ ಅಪಘಾತ ಭಯ, ನವಮದಲ್ಲಿ ಭಾಗ್ಯಚಿಂತೆ, ದಶಮದಲ್ಲಿ ಕಾರ್ಯದಕ್ಷತೆ, ಲಾಭದಲ್ಲಿ ವೈಭವ, ವ್ಯಯದಲ್ಲಿ ಕೃಪಣತ್ವವನ್ನು ಗುಳಿಕನು ನೀಡುತ್ತಾನೆ.

ಗುಳಿಕನು ರವಿಯುತಿಯಲ್ಲಿ ಆತ್ಮಚ್ಯುತಿ, ಚಂದ್ರನಯುತಿಯಲ್ಲಿ ಮಾನಸಿಕ ಕ್ಲೇಶ, ಕುಜನಯುತಿಯಲ್ಲಿ ಬೆಂಕಿಯಿಂದ ಹಾನಿ, ಬುಧನಯುತಿಯಲ್ಲಿ ವಿದ್ಯಾಭ್ಯಾಸದಲ್ಲಿ ವಿಘ್ನ, ಗುರುವಿನಯುತಿಯಲ್ಲಿ ನಾಸ್ತಿಕತೆ, ಶುಕ್ರನಯುತಿಯಲ್ಲಿ

ಕಾಮುಕತೆ, ಶನಿಯಯುತಿಯಲ್ಲಿ ವ್ಯಾಧಿ, ರಾಹುವಿನಯುತಿಯಲ್ಲಿ ವಿಷದಿಂದ ಪೀಡೆ, ಕೇತುವಿನಯುತಿಯಲ್ಲಿ ಕೃತ್ರಿಮ ಅಥವಾ ಕ್ಷುದ್ರ ಜಂತುಗಳಿಂದ ಪೀಡೆಯನ್ನು ನೀಡುತ್ತಾನೆ.

ಗುಳಿಕನು ಲಗ್ನಾಧಿಪತಿಯ ಯುತಿಯಲ್ಲಿ ರೋಗಪೀಡೆ, ಧನಾಧಿಪತಿಯ ಯುತಿಯಲ್ಲಿ ಧನನಾಶ, ತೃತೀಯಾಧಿಪತಿಯ ಯುತಿಯಲ್ಲಿ ಸಹೋದರ ನಾಶ, ಚತುರ್ಥಾಧಿಪತಿಯು ಯುತಿಯಲ್ಲಿ ಮಾತೃಚಿಂತೆ, ಪಂಚಮಾಧಿಪತಿಯು ಯುತಿಯಲ್ಲಿ ಸಂತಾನಚಿಂತೆ, ಷಷ್ಠಾಧಿಪತಿಯ ಯುತಿಯಲ್ಲಿ ಕೃತ್ರಿಮ ಭೀತಿ, ಸಪ್ತಮಾಧಿಪತಿಯ ಯುತಿಯಲ್ಲಿ ಪತ್ನಿಗೆ ಅನಾರೋಗ್ಯ, ಅಷ್ಟಮಾಧಿಪತಿಯ ಯುತಿಯಲ್ಲಿ ಮರಣಭೀತಿ, ನವಮಾಧಿಪತಿಯ ಯುತಿಯಲ್ಲಿ ನಾಸ್ತಿಕತೆ, ಕರ್ಮಾಧಿಪತಿಯ ಯುತಿಯಲ್ಲಿ ಕರ್ಮನಾಶ, ಲಾಭಾಧಿಪತಿಯ ಯುತಿಯಲ್ಲಿ ಲಾಭದ ಹಾನಿ ಮತ್ತು ವ್ಯಯಾಧಿಪತಿಯ ಯುತಿಯಲ್ಲಿ ಅನಾವ್ಯಯವನ್ನು ನೀಡುತ್ತಾನೆ.

ಸಾಮಾನ್ಯವಾಗಿ ಗುಳಿಕನು ತಾನು ಸ್ಥಿತಭಾವದ ಫಲವನ್ನು ನಾಶಮಾಡುತ್ತಾನೆ. ಅಥವಾ ಆ ಭಾವಕ್ಕೆ ಸಂಬಂಧಪಟ್ಟ ವಿಚಾರಗಳಲ್ಲಿ ಅಡೆ-ತಡೆ ನೀಡುತ್ತಾನೆ. ಗುಳಿಕಸ್ಥಿತ ರಾಶ್ಯಾಧಿಪನು ತನ್ನ ದಶಾಕಾಲದಲ್ಲಿ ಸಂಕಷ್ಟಗಳನ್ನು ತಂದೊಡ್ಡುತ್ತಾನೆ.

## ೬. ಗುಳಿಕ-ಶೋಧನೆ

ದಿನಂಪ್ರತಿ ಗುಳಿಕನು ನಿಶ್ಚಿತವಾದ ಕಾಲದಲ್ಲಿ ಉದಯಿಸುತ್ತಾನೆ. ದೈನಂದಿಕ ಗುಳಿಕೋದಯ ಕಾಲವನ್ನು ಇಲ್ಲಿ ಬರೆದಿರುತ್ತದೆ.

**ಚರಂ ರುದ್ರದಾಸ್ಯಂ ಘಟಂ ನಿತ್ಯತಾನಂ ಖನಿರ್ವಾಂದಿ ನಾದ್ಯಃ ಕ್ರಮೇಣಾರ್ಕವಾರಾತ್ । ಅಹರ್ಮಾನ ವೃದ್ಧಿಕ್ಷಯೌ ತತ್ರ ಕಾರ್ಯೌ ನಿಶಾಯಾಂ ತು ವಾರೇಶ್ವರಾತ್ಪಂಚಮಾದ್ಯಾಃ ॥೧೨॥**

ದಿನಮಾನ ಮತ್ತು ರಾತ್ರೆಮಾನ 30 ಘಟಿ ಇರುವಾಗ ಗುಳಿಕನ ಉದಯ ಕಾಲವನ್ನು ರವಿವಾರದಿಂದ ಪ್ರಾರಂಭಿಸಿ, ಸೂರ್ಯೋದಯಾತ್, ಹಗಲಿನ ಉದಯಕಾಲ ಘಟಿ ಮತ್ತು ಸೂರ್ಯಾಸ್ತದಿಂದ ರಾತ್ರೆ ಉದಯಕಾಲ ಘಟಿಗಳನ್ನು

ಮುಂದೆ ಬರೆದಿರುತ್ತದೆ. ದಿನಮಾನ ಅಥವಾ ರಾತ್ರಿಮಾನದಲ್ಲಿ ವ್ಯತ್ಯಾಸವಿದ್ದಲ್ಲಿ ಗುಳಿಕೋದಯ ಕಾಲದಲ್ಲಿಯೂ ತುಲ್ಯವೃದ್ಧಿ - ಕ್ಷಯ ಆಗುತ್ತದೆ.

| ಗುಳಿಕೋದಯ ಕಾಲ ಘಟಿಗಳಲ್ಲಿ | | |
|---|---|---|
| ವಾರ | ದಿವಾ | ರಾತ್ರಿ |
| ರವಿವಾರ | 26 | 10 |
| ಚಂದ್ರವಾರ | 22 | 6 |
| ಕುಜವಾರ | 18 | 2 |
| ಬುಧವಾರ | 14 | 26 |
| ಗುರುವಾರ | 10 | 22 |
| ಶುಕ್ರವಾರ | 6 | 18 |
| ಶನಿವಾರ | 2 | 14 |

ಉದಾ - ತಾ. 20-6-70 ಶನಿವಾರ ಗುಳಿಕ ಶೋಧನೆಯ ಕ್ರಮವನ್ನು ಕೆಳಗೆ ವಿವರಿಸಿ ಬರೆದಿರುತ್ತದೆ.

12°52' ಉತ್ತರ ಅಕ್ಷಾಂಶ 74°50' ರೇಖಾಂಶ.

| | | ಗಂ.-ಮಿ. |
|---|---|---|
| | ತಾ. 20-6-70ರಂದು ಸೂರ್ಯೋದಯ | 6 - 08 |
| | ,, ,, ಸೂರ್ಯಾಸ್ತ | 6 - 56 |
| ಅಂದರೆ | ,, ,, ದಿನಮಾನ | 12 - 48 |

ತಾ. 20-6-70 ದಿನಮಾನವು 12 ಗಂಟೆ 48 ಮಿನಿಟುಗಳು, ಅಂದರೆ 32 ಗಳಿಗೆ ಆಗಿರುತ್ತದೆ. ಆದ್ದರಿಂದ ರಾತ್ರಿಮಾನವು 60-32 ಗಳಿಗೆ=28 ಗಳಿಗೆ ಆಗುತ್ತದೆ.

20ನೇ ತಾರೀಕು ಶನಿವಾರ ಆದ್ದರಿಂದ, ಆ ದಿನದ ಹಗಲಿನ ಗುಳಿಕೋದಯ ಕಾಲವು, ದಿನಮಾನ 30 ಗಳಿಗೆ ಇರುವಾಗ ಸೂರ್ಯೋದಯದ ನಂತರ

2 ಗಳಿಗೆ ಆಗಿರುತ್ತದೆ. ದಿನಮಾನವು 32 ಆದ್ದರಿಂದ ಗುಳಿಕೋದಯ ಕಾಲವು 32×2 ಭಾಗಿಸು 30=2 ಗಳಿಗೆ 8 ವಿಗಳಿಗೆ ಸೂರ್ಯೋದಯದ ನಂತರ ಆಗುತ್ತದೆ. ಈ ದಿನ ಸೂರ್ಯೋದಯದ ನಂತರ 4 ಗಳಿಗೆ 15 ವಿಗಳಿಗೆ ವರೆಗೆ ಕ್ಷಿತಿಜದಲ್ಲಿ ಮಿಥುನರಾಶಿಯು ಗೋಚರಿಸುವುದರಿಂದ ಗುಳಿಕ ಅಥವಾ ಮಾಂದಿಯು ಮಿಥುನ ರಾಶಿಯಲ್ಲಿ ಇದ್ದಾನೆ.

ಶನಿವಾರ ರಾತ್ರಿ ಗುಳಿಕೋದಯ ಕಾಲವು (ರಾತ್ರಿಮಾನ 30 ಗಳಿಗೆ ಇರುವಾಗ) ಸೂರ್ಯಾಸ್ತದ ನಂತರ 14 ಗಳಿಗೆ ಆಗಿರುತ್ತದೆ. ರಾತ್ರಿಮಾನವು 28 ಗಳಿಗೆ ಆದ್ದರಿಂದ ಗುಳಿಕೋದಯ ಕಾಲವು 28×14 ಭಾಗಿಸು 30=13 ಗಳಿಗೆ 4 ವಿಗಳಿಗೆ, ಸೂರ್ಯಾಸ್ತದ ನಂತರ ಆಗುತ್ತದೆ. ಈ ದಿನ ಸೂರ್ಯಸ್ತವಾದ ನಂತರ 13 ಗಳಿಗೆ 4 ವಿಗಳಿಗೆ ಕಾಲದಲ್ಲಿ ಕ್ಷಿತಿಜದಲ್ಲಿ ಕುಂಭರಾಶಿಯು ಗೋಚರಿಸುವುದರಿಂದ, ಮಾಂದಿಯು ರಾತ್ರಿ ಜನನಕ್ಕೆ ಕುಂಭ ರಾಶಿಯಲ್ಲಿ ಇದ್ದಾನೆ.

ಜನನ ವಾರಕ್ಕೆ ಅನುಗುಣವಾದ ಹಗಲಿನ ಅಥವಾ ರಾತ್ರಿಯ ಮಾಂದ್ಯುದಯ ಗಳಿಗೆಗಳನ್ನು ದಿನಮಾನ ಅಥವಾ ರಾತ್ರಿಮಾನಕ್ಕೆ ಅನುಸಾರವಾಗಿ ಸಂಸ್ಕರಿಸಿ, ಗುಳಿಕಸ್ಥಿತಿಯನ್ನು ಶೋಧಿಸಬೇಕು. ಲಗ್ನಾದಿ ಗುಳಿಕಸ್ಥಿತ ಭಾವ ಫಲಗಳನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಿ ಬರೆದಿರುತ್ತದೆ.

## ೨. ಲಗ್ನಸ್ಥಿತ ಮಾಂದಿಫಲ

**ಚೋರ: ಕ್ರೂರೋ ವಿನಯರಹಿತೋ ವೇದಶಾಸ್ತ್ರಾರ್ಥಹೀನೋ**
**ನಾತಿಸ್ಥೂಲೋ ನಯನವಿಕೃತೋ ನಾತಿಧೀರ್ನಾತಿ ಪೂಜ್ಯ: ।**
**ನಾಲ್ಪಾಹಾರೋ ನ ವಿಷಯಪರೋ ನಾತಿ ಜೀವಿ ನ ಶೂರೋ ನಜ್ಞ:**
**ಕೃದ್ಧ: ಕಲಹಕೃದ್‌ಯಂ ಮಂದಪುತ್ರೇ ವಿಲಗ್ನೇ ॥೧೩॥**

ಗುಳಿಕನು ಲಗ್ನದಲ್ಲಿದ್ದರೆ ಚೋರನು, ಕ್ರೂರ ಸ್ವಭಾವದವನು, ವಿನಯ ರಹಿತನು, ವೇದಶಾಸ್ತ್ರಾದಿಗಳನ್ನು ತಿಳಿಯದವನು, ಸ್ಥೂಲವಾದ ಶರೀರವಿಲ್ಲದವನು, ವಿಕಾರವಾದ ಕಣ್ಣು ಉಳ್ಳವನು, ಬುದ್ಧಿವಂತಿಕೆ ಇಲ್ಲದವನು, ಪೂಜಿಸಲ್ಪಡದೇ ಇರುವವನು, ಹೆಚ್ಚು ಆಹಾರ ಸೇವಿಸುವವನು, ವಿಷಯಾಭಿಲಾಷೆ

ಇಲ್ಲದವನು, ಹೆಚ್ಚುಕಾಲ ಬಾಳದೇ ಇರುವವನು, ಶೂರತನ ಇಲ್ಲದವನು, ತಿಳುವಳಿಕೆ ಇಲ್ಲದವನು, ಕೋಪಿಷ್ಠನು, ಕಲಹವಂತನು ಆಗುತ್ತಾನೆ.

**ರಾಜಾಥವಾ ನೃಪಸಮಸ್ತ ಕೃತಾರ್ಥವಿತ್ತ ಶ್ರೀಮಾನ್ ಗಜೇಂದ್ರ ವಾಹನ ವಾಜಿಯುಕ್ತಃ । ಗ್ರಾಮೇ ಪುರೇಚನಗರೇ ಪರಿಪೂಜ್ಯ ಮಾನೋ ಲಗ್ನಸ್ಥ ಮಾಂದಿಫಲ ಇತ್ಯಪರೇ ವದಂತಿ ॥ ೧೪ ॥**

ಗುಳಿಕನು ಲಗ್ನದಲ್ಲಿದ್ದರೆ ರಾಜ ಅಥವಾ ರಾಜತುಲ್ಯನು, ಸಕಲ ಐಶ್ವರ್ಯಗಳಿಂದ ಕೂಡಿದವನು, ಆನೆ, ಕುದುರೆ, ವಾಹನ ಇತ್ಯಾದಿಗಳಿಂದ ಕೂಡಿದವನು, ಗ್ರಾಮಾಧಿಕಾರಿ, ನಗರ ಸಭಾಧಿಪತಿಯಾಗಿ ಪೂಜಿಸಲ್ಪಡುವವನು ಆಗುತ್ತಾನೆ, ಇದು ಲಗ್ನಸ್ಥ ಮಾಂದಿಫಲ ಎಂದು ಇನ್ನಿತರರು ಹೇಳುತ್ತಾರೆ.

**ಪರಾಶರಮತ: –**

**ರೋಗಾರ್ತ್ತ: ಸತತಂ ಕಾಮಿೂ ಪಾಪಾತ್ಮಾಧಿಗತ: ಶಠ: । ತನುಸ್ಥೇ ಗುಲಿಕೇ ಜಾತ: ಖಲಭಾವೋಽತಿ ದುಃಖಿತಃ ॥ ೧೫ ॥**

ಗುಳಿಕನು ಲಗ್ನದಲ್ಲಿದ್ದಾಗ ಜನಿಸಿದವನು ರೋಗದಿಂದ ಪೀಡಿಸಲ್ಪಡುವವನು, ಸದಾಕಾಮಿಯು, ಪಾಪಕಾರ್ಯಗಳಲ್ಲಿ ನಿರತನು, ವಂಚಕನು, ದುಷ್ಟಸ್ವಭಾವದಿಂದ ಅತ್ಯಂತ ದುಃಖಿತನು ಆಗುವನು.

**ಪಾರಿಜಾತಮತ:–**

**......ಗುಲಿಕೇ ಲಗ್ನಸ್ಥಿತೇ ಮಂದಧೀ: । ರೋಗೀ ಪಾಪಯುತೇ ತು ವಂಚನಪರಃ ಕಾಮಿೂ ದುರಾಚಾರವಾನ್ ॥ ೧೬ ॥**

ಗುಳಿಕನು ಲಗ್ನದಲ್ಲಿದ್ದರೆ ಜಾತಕನು ಮಂದಬುದ್ಧಿಯವನು ರೋಗಿಯು ಆಗುತ್ತಾನೆ. ಪಾಪಗ್ರಹರಿಂದ ಕೂಡಿದರೆ ವಂಚಕನು, ಕಾಮಿಯು, ದುರಾಚಾರವಂತನು ಆಗುತ್ತಾನೆ.

**ಪ್ರಶ್ನಮಾರ್ಗಮತ –**

**ರೋಗಿ ಕ್ಷತಾಂಗೋ ಗುಳಿಕೇ ತನುಸ್ಥೇ ।**

ಗುಳಿಕನು ಲಗ್ನದಲ್ಲಿದ್ದರೆ ರೋಗ ಉಳ್ಳವನು ಗಾಯಗೊಂಡ ಶರೀರ ಉಳ್ಳವನು ಆಗುತ್ತಾನೆ.

**ವ್ಯಾಧಿತೋ ಮೃತಕೋವಾಪಿ ಕ್ರುದ್ಧಗೋಜ್ಞಾನ ವಲ್ಲಭಃ ।**
**ಕ್ಷತಾಂಗೋ ವ್ರಣಸಂತಾಪೋ ಗುಳಿಕೇ ಲಗ್ನಸಂಸ್ಥಿತೇ ॥೧೭॥**

ಗುಳಿಕನು ಲಗ್ನದಲ್ಲಿದ್ದರೆ ವ್ಯಾಧಿಪೀಡಿತನು, ಅಥವಾ ಮರಣ ಹೊಂದುವವನು, ಕೋಪಿಷ್ಠನು, ಅಜ್ಞಾನಿಯು, ಗಾಯಗೊಂಡ ಶರೀರ ಉಳ್ಳವನು, ವ್ರಣಾದಿ ರೋಗಗಳಿಂದ ಪೀಡಿತನು ಆಗುತ್ತಾನೆ.

**ಅನುಭವದಲ್ಲಿ ಕಂಡುಬಂದ ಲಗ್ನಸ್ಥ ಮಾಂದಿಫಲ:**

ಗುಳಿಕನು ಲಗ್ನದಲ್ಲಿದ್ದಾಗ ಜನಿಸಿದವರು ಕ್ಷೀಣಕಾಯದವರು, ಉದ್ದವಾದ ಶರೀರ, ಕೆಲವೊಮ್ಮೆ ಅನಾರೋಗ್ಯ ಅಥವಾ ಮಾನಸಿಕ ಅಶಾಂತಿಯಿಂದ ಬಳಲುತ್ತಾರೆ. ಇವರು ಸ್ವಪ್ರಗತಿಗೆ ಉತ್ಸುಕರು. ಇವರಲ್ಲಿ ಬುದ್ಧಿವಂತಿಕೆ, ಕರ್ಮ ಕುಶಲತೆ ಇದ್ದರೂ ನಷ್ಟದ ಭಯ ಅವಮಾನ ಸಂಭವಿಸುವ ಭೀತಿ ಇರುತ್ತದೆ. ಕರ್ಮಕ್ಕೆ ತಕ್ಕ ಪ್ರತಿಫಲ ಇವರಿಗೆ ಲಭಿಸುವುದಿಲ್ಲ. ಅಲ್ಲದೆ ತಮ್ಮಲ್ಲಿರುವ ಬುದ್ಧಿವಂತಿಕೆಯ ವಿಚಾರಗಳನ್ನು ಕಾರ್ಯಗತಗೊಳಿಸಲು ಹಿಂಜರಿಯುತ್ತಾರೆ. ಇವರಿಗೆ ಭವಿಷ್ಯದಲ್ಲಿ ಸಂಭವಿಸುವ ಘಟನೆಗಳನ್ನು ತಿಳಿಯುವ ಸಾಮರ್ಥ್ಯ ಇರುತ್ತದೆ. ಅಕಸ್ಮಾತ್ ಸಂಕಷ್ಟಗಳು ಬಂದೊದಗಿದಾಗ, ಪ್ರಥಮತ ಇವರು ಹಿಂಜರಿದರೂ ಅನಂತರ ತಮ್ಮ ಬುದ್ಧಿವಂತಿಕೆಯಿಂದ ಹಾಗೂ ಕೆಲವೊಮ್ಮೆ ಕುಹಕತನದಿಂದ ಅವುಗಳನ್ನು ಎದುರಿಸಿ ಮುಂದುವರೆಯುತ್ತಾರೆ. ತಮಗೆ ಕೇಡು ಬಗೆದವರನ್ನು ಇವರು ದ್ವೇಷಿಸುತ್ತಾರೆ. ಧಾರ್ಮಿಕ ಪ್ರವೃತ್ತಿ ಇವರಲ್ಲಿದ್ದರೂ, ನಿರಂತರವಾಗಿ ಮುಂದುವರೆಯಲು ವಿಘ್ನಗಳಿಂದ ಪೀಡಿಸಲ್ಪಡುತ್ತಾರೆ.

ಪಾಪಗ್ರಹನಿಂದ ಕೂಡಿ ಗುಳಿಕನು ಲಗ್ನದಲ್ಲಿದ್ದರೆ ಜಾತಕನು ವಂಚಕನು, ಸುಖ-ಶಾಂತಿ ಇಲ್ಲದವನು, ಲಂಪಟನು, ಜಡಮತಿಯು, ಆಗುತ್ತಾನೆ. ಇವರಿಗೆ ದತ್ತಪುತ್ರ ಆಗುವ ಯೋಗ ಇರುತ್ತದೆ. ರವಿಯಿಂದ ಯುತ ಲಗ್ನದ ಗುಳಿಕನು ಶರೀರದಲ್ಲಿ ಉಷ್ಣವಿಕಾರ, ಜ್ವರ, ಪಿತ್ತಬಾಧೆ, ಆತ್ಮವಿಶ್ವಾಸ

ಇಲ್ಲದಿರುವಿಕೆ, ಸಂಘ-ಸಂಸ್ಥೆಗಳಿಂದ, ಸರಕಾರದಿಂದ, ಅಥವಾ ಕರ್ಮಕ್ಷೇತ್ರದಲ್ಲಿ ಮೇಲಧಿಕಾರಿಗಳಿಂದ ಹಾನಿಯನ್ನು ನೀಡುತ್ತಾನೆ. ಕುಜನಿಂದ ಯುತ ಅಥವಾ ದೃಷ್ಟಲಗ್ನದ ಗುಳಿಕನು ಅಗ್ನಿಬಾಧೆ, ಶಸ್ತ್ರಾಘಾತ, ಪಿತ್ತವಿಕಾರಗಳು, ದೀಪ್ತಾಗ್ನಿ, ಕ್ರೂರಸ್ವಭಾವ, ಹಿಂಸಾತ್ಮಕ ಕೃತ್ಯಗಳಲ್ಲಿ ಆಸಕ್ತಿಯನ್ನು ನೀಡುತ್ತಾನೆ. ಜಾತಕನು ಕ್ರೂರಮತಿಯು, ಕ್ರಾಂತಿಕಾರಕ ವಿಚಾರಗಳನ್ನು ಬೋಧಿಸುವವನು, ವಾದ-ವಿವಾದ ಪ್ರವೃತ್ತಿಯವನು ಆಗುತ್ತಾನೆ. ಶನಿಯಿಂದ ದೃಷ್ಟ ಅಥವಾ ಯುತ ಲಗ್ನದ ಗುಳಿಕನು ನರಗಳ ದುರ್ಬಲತೆ, ಅದೃಷ್ಯಶಕ್ತಿ ಅಥವಾ ವಾತವಿಕಾರದಿಂದ ಶಾರೀರಿಕಪಿಡೆ, ನಿಃಶಕ್ತಿ, ಮಲಿನತೆ, ಅನಾರೋಗ್ಯ, ಸೇವಕರಿಂದ ಪೀಡೆ, ನೀಚಜನರಿಂದ ಅವಮಾನ, ಕೈಕೊಂಡ ಕಾರ್ಯಗಳಲ್ಲಿ ವಿಘ್ನ ಇತ್ಯಾದಿ ನೀಡುತ್ತಾನೆ.

ಗುಳಿಕನು ರಾಹುವಿನೊಡನೆ ಯುತ ಅಥವಾ ದೃಷ್ಟನಾಗಿ ಲಗ್ನದಲ್ಲಿದ್ದರೆ ಕ್ರೋಧ, ಕುಟಿಲತೆ, ದುರಾಲೋಚನೆ, ವಿಷಭಯ, ಕ್ಷುದ್ರಜಂತುಗಳಿಂದ ಪೀಡೆ, ವ್ರಣಬಾಧೆ, ದುರ್ಜನರ ಸಹವಾಸದಿಂದ ಹಾನಿ, ಮಾನಸಿಕ ಪೀಡೆಯಿಂದ ಆತ್ಮಹತ್ಯೆಯ ಪ್ರಯತ್ನ, ಬಂಧನ, ಇತ್ಯಾದಿ ಸಂಭವಿಸುತ್ತದೆ. ಗುಳಿಕನು ಕೇತುವಿನೊಡನೆ ಯುತನಾಗಿ ಲಗ್ನದಲ್ಲಿದ್ದರೆ ಮಾನಸಿಕ ಅಶಾಂತಿ ಅಥವಾ ವಿಕಾರಗಳು, ಬುದ್ಧಿಚಾಂಚಲ್ಯ ಅಥವಾ ಮಾನಸಿಕ ದುರ್ಬಲತೆ, ಭಯ, ಕೃತ್ರಿಮ ಮೊದಲಾದ ದುಷ್ಟಶಕ್ತಿಗಳ ಪೀಡೆ, ಕೈಗೊಂಡ ಕಾರ್ಯಗಳಲ್ಲಿ ವಿಘ್ನ ಅಥವಾ ಅಪಜಯ ಸಂಭವಿಸುತ್ತದೆ. ಲಗ್ನದ ಗುಳಿಕ-ಕೇತುಯುತಿ ಗುರು ದೃಷ್ಟವಾದಾಗ ಜಾತಕನು ಕೆಲವೊಂದು ಶಕ್ತಿಯ ಆರಾಧನೆ, ಅದನ್ನು ವಶ ಮಾಡುವುದು, ಅಥವಾ ಶಕ್ತಿಯು ಮೈಮೇಲೆ ಬರುವುದು, ಇತ್ಯಾದಿ ಅತೀಂದ್ರಿಯಜ್ಞಾನ ಇರುವ ಸಂಭವ ಇರುತ್ತದೆ.

ಶುಭಗ್ರಹನಿಂದ ಯುತ ಅಥವಾ ದೃಷ್ಟ, ಗುಳಿಕನು ಲಗ್ನದಲ್ಲಿದ್ದಾಗ, ಶುಭಫಲ, ಅಧಿಕಾರ, ಸಂಪತ್ತು, ಬುದ್ಧಿವಂತಿಕೆ, ಕೈಕೊಂಡಕಾರ್ಯಗಳಲ್ಲಿ ಯಶಸ್ಸು ನೀಡುತ್ತಾನೆ. ಗುಳಿಕನು ಚಂದ್ರನಿಂದ ಯುತ ಅಥವಾ ದೃಷ್ಟನಾಗಿ ಲಗ್ನದಲ್ಲಿದ್ದರೆ ಬುದ್ಧಿವಂತನು, ಶೀಘ್ರಮತಿಯು, ಮೇಧಾವಿಯು, ಆದರೆ ಮಾನಸಿಕ ಚಂಚಲತೆ ಮತ್ತು ವಿಚಾರಗಳಲ್ಲಿ ತಡೆ, ತಾಯಿಯೊಡನೆ ಕಲಹ,

ಜಲಭೀತಿ ಇರುತ್ತದೆ. ಗುಳಿಕನು ಬುಧನಿಂದ ಯುತನಾದಾಗ ಬುದ್ಧಿವಂತಿಕೆ, ಗಣಿತ, ಕಲೆ ಇತ್ಯಾದಿಗಳಲ್ಲಿ ಕುಶಲತೆ, ಸೋದರಮಾವನೊಂದಿಗೆ ಕಲಹ, ಚರ್ಮವ್ಯಾಧಿ ಅಥವಾ ಮಾನಸಿಕ ಪೀಡೆ ಸಂಭವಿಸುತ್ತದೆ.

ಗುರುವಿನಿಂದ ದೃಷ್ಟ ಅಥವಾ ಯುತ ಗುಳಿಕನು ವ್ಯವಹಾರಜ್ಞಾನ, ಲೋಕಾನುಭವ, ತಿಳುವಳಿಕೆ, ಧಾರ್ಮಿಕ ಪ್ರವೃತ್ತಿ, ಗುರುಹಿರಿಯರೊಂದಿಗೆ ಕಲಹ, ಧಾರ್ಮಿಕ ಕಾರ್ಯಗಳಲ್ಲಿ ವಿಘ್ನಗಳು, ಸಂಘ-ಸಂಸ್ಥೆಗಳ ಆಡಳಿತಗಳಲ್ಲಿ ಅಪವಾದಗಳು ಬರುತ್ತವೆ. ಗುಳಿಕನು ಶುಕ್ರನೊಂದಿಗೆ ಯುತ ಅಥವಾ ದೃಷ್ಟನಾಗಿ ಲಗ್ನದಲ್ಲಿದ್ದರೆ ವ್ಯವಹಾರ ಕುಶಲತೆ ಯುಕ್ತಿ - ಕುಯುಕ್ತಿಯುತ ವಿಚಾರಗಳು, ತೀವ್ರ ವಿಷಯಾಭಿಲಾಷೆ, ವೀರ್ಯನಾಶ ಮತ್ತು ಪತ್ನಿಗೆ ಶಾರೀರಿಕ ದುರ್ಬಲತೆ ಇರುತ್ತದೆ.

ಸಾಮಾನ್ಯವಾಗಿ ಲಗ್ನಸ್ಥ ಗುಳಿಕನು ಶಾರೀರಿಕ ಆಯಾಸ, ಮಾನಸಿಕ ಅಶಾಂತಿ, ವಿಚಾರಧಾರೆಯಲ್ಲಿ ತಡೆಯನ್ನು ಉಂಟುಮಾಡುತ್ತಾನೆ.

| ಚಂದ್ರ ೩ | | | ಕೇತು ೧ |
|---|---|---|---|
| ಶನಿ ೧೦ | ಮಾದರಿ ಜಾತಕ 1<br>ಶಿಷ್ಟ ಶನಿದಶಾ-<br>ವ.೪ ಮಾ.೪ ದಿ.೨೨<br>೨೫-೧೨-೧೯೩೫ | | |
| ಲಗ್ನ ೧<br>ಮಾಂದಿ ೧<br>ಕುಜ ೧೧ | | | |
| ರಾಹು ೭ | ಬುಧ ೮<br>ಗುರು ೭<br>ರವಿ ೯ | ಶುಕ್ರ ೮ | |

ಮಾದರಿ ಜಾತಕ ಒಂದರ ಮಕರಲಗ್ನ ಜಾತಕನು ಬುಧದಶಾ. ಕುಜಭುಕ್ತಿಯಲ್ಲಿ ದತ್ತಪುತ್ರನಾಗಿರುತ್ತಾನೆ. ಲಗ್ನಾಧಿಪತಿ ಶನಿಯು

ಕುಟುಂಬಸ್ಥಾನದಲ್ಲಿ ಸ್ವಕ್ಷೇತ್ರದವನಾದ್ದರಿಂದ, ಕಟುಂಬೀಯರೇ ದತ್ತಪಡೆದಿರುತ್ತಾರೆ. ಕುಜಮಾಂದಿಯೋಗ ಸಾರಿಗೆ-ಸಂಪರ್ಕ ವ್ಯವಸಾಯ ನೀಡಿರುತ್ತದೆ. ಶುಕ್ರದಶಾ ಗುರುಭುಕ್ತಿಯಲ್ಲಿ ಜಾತಕನ ಹಿರಿಯ ಸಹೋದರನ ನಿಧನ ಆಗಿರುತ್ತದೆ.

## ೮. ದ್ವಿತೀಯದಲ್ಲಿ ಮಾಂದಿ

**ವಿವೇಕಹೀನಃ ಕ್ರೋಧೀಚ ನಿಸ್ಸಹೀ ನಿಂದ್ಯ ವಾಚಕಃ ।**
**ಸ್ವತಂತ್ರೋ ಲೋಕ ವಿದ್ವೇಷೀ ಗುಳಿಕೇ ವಿತ್ತ ಸಂಸ್ಥಿತೇ ॥ ೧೮ ॥**

ಗುಳಿಕನು ದ್ವಿತೀಯದಲ್ಲಿ ಇದ್ದರೆ ಜಾತಕನು ವಿವೇಕಹೀನನು, ಕ್ರೋಧ ಉಳ್ಳವನು ಸಹನಾಶಕ್ತಿ ಇಲ್ಲದವನು, ನಿಂದಿತ ಅಥವಾ ಅವಾಚ್ಯ ಮಾತುಗಳನ್ನು ಆಡುವವನು, ಸ್ವತಂತ್ರ ವಿಚಾರಗಳಿಂದ ಕೂಡಿದವನು, ಜನರನ್ನು ದ್ವೇಷಿಸುವವನು ಆಗುತ್ತಾನೆ.

**ಫಲದೀಪಿಕಾ ಮತ:**

**ನ ಚಾಟುವಾಕ್ಯಂ ಕಲಹಾಯಮಾನೋ ನ ವಿತ್ತಧಾನ್ಯಂ ಪರದೇಶ ವಾಸೀ । ನವಾನ್ನ ಸೂಕ್ಷ್ಮಾರ್ಥ ವಿವಾದ ವಾಕ್ಯೋ ದಿನೇಶ ಪೌತ್ರೇ ಧನರಾಶಿ ಸಂಸ್ಥೇ ॥ ೧೯ ॥**

ಗುಳಿಕನು ದ್ವಿತೀಯದಲ್ಲಿ ಇದ್ದರೆ ಸುಂದರವಾದ ಮಾತುಗಳು ಇಲ್ಲದವನು, ಕಲಹವನ್ನು ಮಾಡುವವನು, ಧನ-ಧಾನ್ಯ ಸಂಪತ್ತಿಲ್ಲದವನು, ವಿದೇಶವಾಸಿಯು, ಆಹಾರವಿಲ್ಲದವನು, ಸೂಕ್ಷ್ಮಾರ್ಥದಿಂದ ಕೂಡಿದ ಮತ್ತು ವಿವಾದಉಳ್ಳ ಮಾತುಗಳನ್ನು ಆಡುವವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:**

**ವಿತ್ತಸ್ಥೇ ವಿಷಯಾತುರೋऽಟನಪರಃ ಕ್ರೋಧೀ ದುರಾಲಾಪವಾನ್ । ಪಾಪವ್ಯೋಮಚರಾನ್ವಿತೇ ಗತಧನೋ ವಿದ್ಯಾವಿಹೀನೋऽಥವಾ ॥ ೨೦ ॥**

ಗುಳಿಕನು ದ್ವಿತೀಯದಲ್ಲಿ ಇದ್ದರೆ ವಿಷಯಾತುರನು, ಸಂಚಾರಶೀಲನು, ಕೋಪಿಷ್ಠನು, ಅಶ್ಲೀಲ ಮಾತುಗಳನ್ನು ಆಡುವವನು, ವಾಚಾಳಿಯು ಆಗುತ್ತಾನೆ. ಗುಳಿಕನು ಪಾಪಗ್ರಹನಿಂದ ಯುತನಾಗಿ ದ್ವಿತೀಯದಲ್ಲಿ ಇದ್ದರೆ ಧನವನ್ನು ಕಳಕೊಳ್ಳುತ್ತಾನೆ, ಅಥವಾ ವಿದ್ಯೆ ಇಲ್ಲದವನು ಆಗುತ್ತಾನೆ.

**ಪರಾಶರ ಮತ -**

**ವಿಕೃತೋ ದುಃಖಿತಃ ಕ್ಷುದ್ರೋ ವ್ಯಸನೀ ಚ ಗತತ್ರಪಃ ।**
**ಧನಸ್ಥೇ ಗುಲಿಕೇ ಜಾತೋ ನಿಃಸ್ವೋ ಭವತಿ ಮಾನವಃ ॥೨೧॥**

ಧನಸ್ಥಾನದಲ್ಲಿ ಗುಳಿಕನಿದ್ದರೆ ವಿಕೃತರೂಪ, ದುಃಖಿತನು, ಕ್ಷುದ್ರಕಾರ್ಯಗಳನ್ನು ಮಾಡುವವನು, ವ್ಯಸನವಂತನು, ನಿರ್ಲಜ್ಜನು, ಧನ-ಸಂಪತ್ತನ್ನು ಕಳಕೊಂಡವನು ಆಗುತ್ತಾನೆ.

**ಪ್ರಶ್ನಮಾರ್ಗ ಮತ:- ನಿಂದ್ಯಾಭಿಭಾಷಿ ಧನಗೇ ವಿವೇಷಃ**

ಧನಸ್ಥಾನದಲ್ಲಿ ಗುಳಿಕನಿದ್ದರೆ ನಿಂದಿತ, ಅವಾಚ್ಯ ಮಾತುಗಳನ್ನು ಆಡುವವನು ಕೊಳಕುವಸ್ತ್ರ ಧರಿಸುವವನು ಆಗುತ್ತಾನೆ.

**ಅನುಭವದಲ್ಲಿ ಕಂಡುಬಂದ ದ್ವಿತೀಯದ ಮಾಂದಿಫಲ:-**

ಗುಳಿಕನು ಧನಸ್ಥಾನದಲ್ಲಿ ಇದ್ದರೆ ವಾಚಾಳಿಯು, ಅನಾವಶ್ಯಕ ಅಥವಾ ಅಶ್ಲೀಲ ಮಾತುಗಳನ್ನು ಆಡುವವನು, ವಾದ-ವಿವಾದ ನಿರತನು ಆಗುತ್ತಾನೆ. ಕುಟುಂಬಕಲಹ ಅಥವಾ ಸ್ವಜನರೊಂದಿಗೆ ವಿವಾದ ಇರುತ್ತದೆ. ಪರರ ಲೋಪ ದೋಷಗಳನ್ನು ಎತ್ತಿಹಿಡಿದು ಅವರ ಮಾತುಗಳನ್ನು ಟೀಕಿಸುವ ಇವರಲ್ಲಿ ಉದ್ವಿಗ್ನತೆ, ಶೀಘ್ರ ಕೋಪ ಮತ್ತು ವಿವಾದ ಪ್ರವೃತ್ತಿ ಕಂಡುಬರುತ್ತದೆ. ಇವರು ದೃಷ್ಟಿದೋಷ ಕಣ್ಣುನೋವಿನಿಂದ ಪೀಡಿಸಲ್ಪಡುತ್ತಾರೆ. ಇವರಲ್ಲಿ ಉತ್ತಮ ಆಹಾರ ವಿಹಾರಗಳ ಅಪೇಕ್ಷೆ ಇರುತ್ತದೆ, ಆದರೆ ಕ್ಲಪ್ತಸಮಯಕ್ಕೆ ಆಹಾರವು ಲಭಿಸದು, ಅಥವಾ ಬಾಯಿರುಚಿ ಇರುವುದಿಲ್ಲ. ಧನಪ್ರಾಪ್ತಿಕಾಲದಲ್ಲಿ ವಿಘ್ನಗಳು ತಲೆದೋರುವುದು ಕಂಡುಬರುತ್ತದೆ.

ಪಾಪಗ್ರಹರಿಂದ ದೃಷ್ಟ ಅಥವಾ ಯುತ ಗುಳಿಕನು ದ್ವಿತೀಯದಲ್ಲಿ ಇದ್ದರೆ, ಆರ್ಥಿಕ ಅಡಚಣೆಯಿಂದ ಪೀಡಿಸಲ್ಪಡುತ್ತಾರೆ. ವಾಕ್‌ದೋಷ ಅಥವಾ ಮಾತಾಡುವಾಗ ತಡೆ ಉಂಟಾಗುತ್ತದೆ. ವಿದ್ಯಾಭ್ಯಾಸದಲ್ಲಿ ವಿಘ್ನಗಳು, ಅಥವಾ ವಿದ್ಯಾಭ್ಯಾಸ ಪೂರ್ತಿಗೊಳಿಸಲು ಅಸಮರ್ಥರು ಆಗುತ್ತಾರೆ. ಸ್ವಜನರೊಂದಿಗೆ ವಾದ-ವಿವಾದ, ಕಲಹ ಸಂಭವಿಸಿ, ಕೋರ್ಟು ಕಛಹರೀ ವ್ಯವಹಾರಗಳಲ್ಲಿ ಸಿಲುಕಿ ಧನನಾಶ, ಸಂಪತ್ತಿನ ಅವನತಿಯಾಗಿ ಆರ್ಥಿಕ ಸಂಕಷ್ಟಗಳಿಗೆ ಈಡಾಗುತ್ತಾರೆ. ಕುಟುಂಬದ ಏಳಿಗೆಗೆ ಪರಿಶ್ರಮಿಸಿದರೂ ಇವರಿಗೆ ಸ್ವಜನರಿಂದ ಅಪವಾದ ಹಾಗೂ ನಷ್ಟ ಉಂಟಾಗುತ್ತದೆ.

ಗುಳಿಕನು ಕುಜನಯುತಿಯಲ್ಲಿ ದ್ವಿತೀಯದಲ್ಲಿ ಇದ್ದಾಗ ಸಹೋದರರೊಡನೆ ಕಲಹ ಸಂಭವಿಸಿ ಧನನಾಶ ಆಗುತ್ತದೆ. ಭೂ ವ್ಯವಹಾರಗಳಲ್ಲಿ ನಷ್ಟ ಅಥವಾ ಅಪಜಯ, ತೀಕ್ಷ್ಣ ಮಾತುಗಳಿಂದ ಮತ್ತು ವಾದ-ವಿವಾದ ಪ್ರವೃತ್ತಿಯಿಂದ ಹಾನಿ ಅಥವಾ ಅಪಕೀರ್ತಿಗೆ ಈಡಾಗುತ್ತಾರೆ. ಯಂತ್ರಗಳಿಂದ ಹಾನಿ ಮತ್ತು ಅಪಘಡ, ಬೆಂಕಿಯಿಂದ ನಷ್ಟ, ಸಂಭವಿಸುತ್ತದೆ. ಗುಳಿಕನು ಶನಿಯಯುತಿಯಲ್ಲಿ ಇದ್ದಾಗ ನೀಚಕೃತ್ಯ ಅಥವಾ ದುರ್ವ್ಯಸನಗಳಿಂದ ಸಂಪತ್ತಿನ ಅವನತಿ, ಕೈಕೆಳಗಿನವರಿಂದ ಪೀಡೆ ಅಥವಾ ಕಳ್ಳರಿಂದ ಹಾನಿ ಸಂಭವಿಸುತ್ತದೆ. ಪರಿಶ್ರಮಕ್ಕೆ ತಕ್ಕ ಪ್ರತಿಫಲ ಲಭಿಸದೇ ಆರ್ಥಿಕ ದುಃಸ್ಥಿತಿಯಿಂದ ಪೀಡಿಸಲ್ಪಡುತ್ತಾರೆ.

**''ರಾಹೌ ದ್ವಿತೀಯೇ ಗುಳಿಕೇನ ದೃಷ್ಟೇ ಯುಕ್ತೇಥವಾ ಸರ್ಪ ಭಯಂ ವದಂತಿ'' ।**

ದ್ವಿತೀಯದ ರಾಹುವು ಗುಳಿಕನ ದೃಷ್ಟಿ ಅಥವಾ ಯುತಿಯಲ್ಲಿ ಇದ್ದರೆ ಸರ್ಪಭಯ ಅಥವಾ ಸರ್ಪದಿಂದ ಹಾನಿ ಆಗುತ್ತದೆ.

ಗುಳಿಕನು ರಾಹುವಿನ ಯುತಿಯಲ್ಲಿ ದ್ವಿತೀಯದಲ್ಲಿ ಇದ್ದರೆ ಧನ-ಸಂಪತ್ತಿನ ಲಾಲಸೆಯಿಂದ ನೀಚ ಕೃತ್ಯಗಳನ್ನು ಮಾಡಿ ಅಪಕೀರ್ತಿಗೀಡಾಗುತ್ತಾರೆ. ಇವರ ಧನ-ಸಂಪತ್ತು ಕಳ್ಳತನ ಅಥವಾ ವಂಚನೆಯಿಂದ ಹಾನಿಗೀಡಾಗುತ್ತದೆ. ಕುತ್ಸಿತಾನ್ನ, ನಿಕೃಷ್ಟ ವಸ್ತುಗಳ ಸೇವನೆಯಿಂದ ಆರೋಗ್ಯದ ಹಾನಿ ಆಗುತ್ತದೆ. ವಿಷವಸ್ತುಗಳಿಂದ ಸಂಕಷ್ಟಕ್ಕೀಡಾಗುತ್ತಾರೆ. ಕುಟುಂಬದಲ್ಲಿ ಅಪಮೃತ್ಯು ಅಥವಾ

ಅಕಾಲ ಮರಣ ಸಂಭವಿಸುತ್ತದೆ. ಕುಟುಂಬೀಯರಲ್ಲಿ ಉನ್ನತಿ ಅವನತಿ ಸಂಭವಿಸುವುದು ಕಂಡುಬರುತ್ತದೆ. ಗುಳಿಕನು ಕೇತುವಿನ ಯುತಿಯಲ್ಲಿ ಇದ್ದಾಗ ಕುಟುಂಬಛಿದ್ರ, ವಾಕ್‌ದೋಷ, ಉದ್ರ್ಯಾಂಗ ರೋಗ ಮತ್ತು ದೃಷ್ಟಿದೋಷದಿಂದ ಪೀಡಿಸಲ್ಪಡುತ್ತಾರೆ. ಕುಟುಂಬದಲ್ಲಿ ಅಪಘಾತ, ಅಥವಾ ದುರ್ಮರಣ ಸಂಭವಿಸಿರುತ್ತದೆ. ಇದರಿಂದ ಪ್ರೇತಬಾಧೆ, ಕುಟುಂಬದಲ್ಲಿ ಅಶಾಂತಿ ಇರುತ್ತದೆ. ಕುಟುಂಬದವರಿಗೆ ಅಥವಾ ಪರರಿಗೆ ಸಹಾಯ ಮಾಡಲು ಪ್ರಯತ್ನಿಸಿ ನಷ್ಟ, ಅಪವಾದಗಳಿಗೀಡಾಗುತ್ತಾರೆ. ಧನಸಂಪತ್ತಿನ ವಿವಾದದಿಂದ ಕೋರ್ಟು-ಕಛಹರೀ ವ್ಯವಹಾರ ಸಂಭವಿಸುತ್ತವೆ. ಗೂಢವಿದ್ಯೆಗಳಲ್ಲಿ ಆಸಕ್ತಿ ಇರುತ್ತದೆ. ಇವರು ವಂಚನೆಯಿಂದ ಹಾನಿಗೀಡಾದಾಗ ಪಶ್ಚಾತ್ತಾಪದಿಂದ ಆಡಿದ ಮಾತುಗಳಂತೆ ಕೇಡು ಸಂಭವಿಸುವುದು ಕೆಲವೊಮ್ಮೆ ಕಂಡುಬರುತ್ತದೆ.

ಶುಭಗ್ರಹರಿಂದ ದೃಷ್ಟ ಅಥವಾ ಯುತ ಗುಳಿಕನು ದ್ವಿತೀಯದಲ್ಲಿ ಇದ್ದರೆ ಮಾತಿನಲ್ಲಿ ಚತುರತೆ, ಪ್ರಯತ್ನದಿಂದ ಸಂಪತ್ತಿನ ಅಭಿವೃದ್ಧಿ, ಕುಟುಂಬೀಯರ ಪ್ರಗತಿಗೆ ಸಹಾಯಕರು ಆಗುತ್ತಾರೆ. ಆದರೆ ಸ್ವಜನರಿಂದ ಅಪವಾದ, ಕಲಹ, ಉಂಟಾಗುತ್ತದೆ. ಆರ್ಥಿಕ ಪರಿಸ್ಥಿತಿ ತೃಪ್ತಿಕರ ಆಗಿರುತ್ತದೆ. ಗುಳಿಕನು ಚಂದ್ರನ ಯುತಿಯಲ್ಲಿದ್ದಾಗ ಸ್ತ್ರೀಯರ ಒಳತಿಗೆ ಪ್ರಯತ್ನಿಸಿ ಟೀಕಿಸಲ್ಪಡುತ್ತಾರೆ. ಗುಳಿಕನು ಬುಧನ ಯುತಿಯಲ್ಲಿದ್ದಾಗ ದಸ್ತಾವೇಜು ಬರೆಯುವುದು, ಲೆಕ್ಕ ಪರಿಶೋಧನೆ ಇತ್ಯಾದಿಗಳಲ್ಲಿ ವಂಚನೆ, ಜಾಮೀನು ವ್ಯವಹಾರದಲ್ಲಿ ಹಾನಿ ಸಂಭವಿಸುತ್ತದೆ. ಗುಳಿಕನು ಗುರುವಿನ ಯುತಿ ಅಥವಾ ದೃಷ್ಟಿಯಲ್ಲಿದ್ದಾಗ ಹೇಳಿದ ಮಾತಿನಂತೆ ನಡೆಯುವವನು, ಧಾರ್ಮಿಕ ಕಾರ್ಯಕಲಾಪಗಳಲ್ಲಿ ಆಸಕ್ತಿ ಉಳ್ಳವನು, ಪರರಿಗೆ ಸೂಕ್ತ ಸಲಹೆಯಿಂದ ಮಾರ್ಗದರ್ಶನ ಮಾಡುವವನು, ಕುಟುಂಬದ ಅಭಿವೃದ್ಧಿಗೆ ಪರಿಶ್ರಮಿಸುವವನು ಆಗುತ್ತಾನೆ. ಗುಳಿಕನು ಶುಕ್ರನ ಯುತಿಯಲ್ಲಿ ಇದ್ದಾಗ ಸ್ತ್ರೀ ಹೇತುವಿನಿಂದ ಕುಟುಂಬ ಕಲಹ, ಚತುರತೆಯಿಂದ ಆರ್ಥಿಕ ಸಂಕಷ್ಟಗಳನ್ನು ಎದುರಿಸಿ ಪ್ರಗತಿಹೊಂದುತ್ತಾರೆ.

ಸಾಮಾನ್ಯವಾಗಿ ದ್ವಿತೀಯದ ಗುಳಿಕನು ಪ್ರೇತಬಾಧೆ, ಕುಟುಂಬ ಕಲಹ ವಿದ್ಯಾಭ್ಯಾಸದಲ್ಲಿ ವಿಘ್ನ, ವಾಚಾಳಿತನ ಮತ್ತು ಆರ್ಥಿಕ ಸಂಕಷ್ಟಗಳನ್ನು ತಂದೊಡ್ಡುವುದು ಕಂಡುಬರುತ್ತದೆ.

# ೯. ತೃತೀಯದಲ್ಲಿ ಮಾಂದಿ

**ಪಾರಿಜಾತ ಮತ:-**

**ವಿರಹಗರ್ವ ಮದಾದಿ ಗುಣೈರ್ಯುತಃ ಪ್ರಚುರಕೋಪಧನಾರ್ಜನ ಸಂಭ್ರಮಃ । ವಿಗತಶೋಕಭಯಶ್ಚ ವಿಸೋದರಃ ಸಹಜಧಾಮನಿ ಮಂದಸುತೇಯದಾ ॥ ೨೨ ॥**

ಶನಿಯ ಪುತ್ರನಾದ ಮಾಂದಿಯು ತೃತೀಯದಲ್ಲಿ ಇದ್ದರೆ ಜಾತಕನು ವಿರಹ, ಗರ್ವ, ಮದ-ಮತ್ಸರ ಇತ್ಯಾದಿ ಗುಣಗಳಿಂದ ಕೂಡಿದವನು, ಅತ್ಯಂತ ಕೋಪಿಷ್ಠನು, ಧನಾರ್ಜನೆಯಲ್ಲಿ ನಿರತನು, ದುಃಖ, ಭಯ ಇಲ್ಲದವನು, ಸಹೋದರರನ್ನು ಕಳಕೊಂಡವನು ಆಗುತ್ತಾನೆ.

**ಶೂರೋ ಪರಾಕ್ರಮಿೂ ಭವ್ಯ ಸೋದರಾದಿ ಜನದ್ವಿಷಃ ।**
**ಅವಿವೇಕಿ ಬಲಾಢ್ಯಶ್ಚ ಗುಳಿಕೇ ಭ್ರಾತೃ ಸಂಸ್ಥಿತೇ ॥ ೨೪ ॥**

ಗುಳಿಕನು ತೃತೀಯದಲ್ಲಿ ಇದ್ದರೆ ಪರಾಕ್ರಮಿ, ಶೂರನು, ಪುಷ್ಟ ಶರೀರ ಉಳ್ಳವನು, ಸಹೋದರರನ್ನು, ತನ್ನ ಕುಟುಂಬದವರನ್ನು ದ್ವೇಷಿಸುವವನು, ಅವಿವೇಕಿಯು, ಬಲಾಢ್ಯನು ಆಗುತ್ತಾನೆ.

**ಪರಾಶರ ಮತ:-**

**ಚಾರ್ವಾಂಗೋ ಗ್ರಾಮಪಃ ಪುಣ್ಯಸಂಯುಕ್ತಃ ಸಜ್ಜನಪ್ರಿಯಃ ।**
**ಸಹಜೇ ಗುಲಿಕೇ ಜಾತೋ ಮಾನವೋ ರಾಜಪೂಜಿತಃ ॥ ೨೪ ॥**

ಗುಳಿಕನು ತೃತೀಯದಲ್ಲಿ ಇದ್ದರೆ ಸುಂದರವಾದ ಅಂಗಾಂಗ ಉಳ್ಳವನು, ಗ್ರಾಮಾಧಿಕಾರಿ, ಪುಣ್ಯವಂತನು, ಸಜ್ಜನಪ್ರಿಯನು, ರಾಜಪೂಜಿತನು ಆಗುತ್ತಾನೆ.

**ಪ್ರಶ್ನಮಾರ್ಗ ಮತ :-**

**ಸೋತ್ಥಂ ದ್ವಿಷನ್ ಭ್ರಾತೃಗತೇ ಸ ಶೌರ್ಯಃ**

ತೃತೀಯದಲ್ಲಿ ಗುಳಿಕನಿದ್ದರೆ ಸಹೋದರರನ್ನು ದ್ವೇಷಿಸುವವನು, ಶೂರನು ಆಗುತ್ತಾನೆ.

**ಅನುಭವದಲ್ಲಿ ಕಂಡುಬಂದ ಫಲ -**

ಗುಳಿಕನು ತೃತೀಯದಲ್ಲಿ ಇದ್ದರೆ ಧೈರ್ಯವಂತನು, ಕಷ್ಟಸಾಧ್ಯ ಕೆಲಸಗಳನ್ನು ಸಾಧಿಸುವವನು, ಛಲಸ್ವಭಾವದವನು ಆಗುತ್ತಾನೆ, ತೃತೀಯದ ಮಾಂದಿಯಿಂದ ಸಹೋದರರ ನಷ್ಟ ಅಥವಾ ವಿರಹ ಸಂಭವನೀಯ. ಇವರು ಪರಾಕ್ರಮಿಗಳಾದರೂ ಇವರಲ್ಲಿ ಅಪಜಯದ ಭಯ ಮತ್ತು ಸಂಶಯಾಸ್ಪದ ಪ್ರವೃತ್ತಿ ಇರುತ್ತದೆ. ಇವರು ಪ್ರಯತ್ನ ಮತ್ತು ಸಾಹಸದಿಂದ ಧನ-ಸಂಪತ್ತನ್ನು ಗಳಿಸುತ್ತಾರೆ. ವೈದ್ಯಕೀಯದಲ್ಲಿದ್ದರೆ ಚಿಕಿತ್ಸಾನಿಪುಣರು ಆಗುತ್ತಾರೆ. ಇವರಿಗೆ ತಮ್ಮವಾದವನ್ನೇ ಸಮರ್ಥಿಸುವ ಹಠಸ್ವಭಾವ ಇರುವುದರಿಂದ ಗುರು ಹಿರಿಯರೊಂದಿಗೆ ಬೇಧಾಭಿಪ್ರಾಯ ಉಂಟಾಗುತ್ತದೆ. ಇವರು ಸದಾಕಾಲ ತಮ್ಮ ಭಾಗ್ಯದ ಅಭಿವೃದ್ಧಿಗೆ ಉತ್ಸುಕರಾಗಿರುತ್ತಾರೆ ಹಾಗೂ ಸ್ವತಂತ್ರ ಉದ್ಯಮಗಳನ್ನು ನಿರ್ವಹಿಸುವ ಹಂಬಲ ಇವರಲ್ಲಿರುತ್ತದೆ.

ಗುಳಿಕನು ಪಾಪಗ್ರಹನ ದೃಷ್ಟಿ ಅಥವಾ ಯುತಿಯಲ್ಲಿ ತೃತೀಯದಲ್ಲಿ ಇದ್ದಾಗ ಸಹೋದರನಾಶ, ಅಥವಾ ಸಹೋದರರೊಂದಿಗೆ ಕಲಹ, ವ್ಯಾಜ್ಯ, ಸಂಭವಿಸುತ್ತದೆ. ಸಹಾಯಕರು ಅಥವಾ ಕೈಕೆಳಗಿನವರಿಂದ ಹಾನಿಯಾಗುತ್ತದೆ. ಧನಸಂಪತ್ತನ್ನು ಗಳಿಸಲು ಪ್ರಯತ್ನಿಸುತ್ತಾರೆ. ಆದರೆ ಧನಸಂಚಯ ಆಗುವುದಿಲ್ಲ. ಧೈರ್ಯವಂತರಾದರೂ ಕಾರ್ಯೋನ್ಮುಖರಾಗುವಾಗ ನಷ್ಟ ಅಥವಾ ಅವಮಾನದ ಭಯದಿಂದ ಪೀಡಿಸಲ್ಪಡುತ್ತಾರೆ. ಇವರಲ್ಲಿ ಶೀಘ್ರಕೋಪ, ವಾದ-ವಿವಾದ ಪ್ರವೃತ್ತಿ ಮತ್ತು ತಮ್ಮ ವಾದವನ್ನೇ ಸಮರ್ಥಿಸುವ ಛಲ ಸ್ವಭಾವ ಇರುತ್ತದೆ. ಕಫಬಾಧೆ, ಎದೆನೋವು ಅಥವಾ ಬಾಹುವೇದನೆ ಇರುತ್ತದೆ.

ಗುಳಿಕನು ಕುಜನಯುತಿ ಅಥವಾ ದೃಷ್ಟಿಯಲ್ಲಿ ಇದ್ದಾಗ ಜಾತಕನು ತೀಕ್ಷ್ಣ ಸ್ವಭಾವದವನು, ಸಾಹಸಕಾರ್ಯಗಳನ್ನು ಮಾಡುವವನು. ಆಗುತ್ತಾನೆ. ಯಂತ್ರಗಳಿಂದ ಹಾನಿ, ಭೂವಿವಾದ ಇರುತ್ತದೆ. ಸಹೋದರನಿಗೆ ಅಕಾಲ ಮರಣ ಅಥವಾ ಅಪಘಾತ ಸಂಭವಿಸುತ್ತದೆ. ಗುಳಿಕನು ಶನಿಯ ಯುತಿಯಲ್ಲಿ ಇದ್ದಾಗ ಅಪಧೈರ್ಯ, ಅವಮಾನದ ಭೀತಿ, ನೀಚಜನರಿಂದ ಹಾನಿ, ಕೈಕೊಂಡ ಕಾರ್ಯಗಳಲ್ಲಿ ದೀರ್ಘಕಾಲದ ನಂತರ ಜಯ ಉಂಟಾಗುತ್ತದೆ. ಗುಳಿಕನು

ರಾಹುವಿನ ಯುತಿಯಲ್ಲಿದ್ದಾಗ ನೀಚಜನರೊಂದಿಗೆ ಕಲಹ, ಜಗಳ ಸಂಭವಿಸುತ್ತದೆ. ವಿಷವಸ್ತುಗಳಿಂದ ಲಾಭ ಆಗುತ್ತದೆ. ವಿಷಪ್ರಯೋಗ, ಜಯಾಪಜಯ ಲಭಿಸುತ್ತದೆ, ಗುಳಿಕನು ಕೇತುವಿನ ಯುತಿಯಲ್ಲಿದ್ದಾಗ ಗೂಢವ್ಯಾಧಿಗಳು, ಕೃತ್ರಿಮಭಯ ಮತ್ತು ಸಂಶಯಾಸ್ಪದ ಪ್ರವೃತ್ತಿಯಿಂದ ಪೀಡಿಸಲ್ಪಡುತ್ತಾರೆ.

ಗುಳಿಕನು ಶುಭಗ್ರಹರಿಂದ ದೃಷ್ಟ ಅಥವಾ ಯುತನಾಗಿ ತೃತೀಯದಲ್ಲಿ ಇದ್ದರೆ ಸಾಹಸ ಮತ್ತು ಪರಿಶ್ರಮದಿಂದ ಧನಪ್ರಾಪ್ತಿ, ಸ್ಥಾನ-ಮಾನ, ಕೀರ್ತಿಪಡೆಯುತ್ತಾರೆ. ಕೈಕೊಂಡ ಕಾರ್ಯಗಳಲ್ಲಿ ಯಶಸ್ಸು, ಉನ್ನತ ಅಧಿಕಾರ, ಸಂಶೋಧನಾ ಪ್ರವೃತ್ತಿ, ನೂತನ ಆವಿಷ್ಕಾರ, ರಾಜಮರ್ಯಾದೆ ಇತ್ಯಾದಿ ಲಭಿಸುತ್ತದೆ. ಪರಿಶ್ರಮದಿಂದ ಪ್ರಗತಿ ಹೊಂದುತ್ತಾರೆ.

ಸಾಮಾನ್ಯವಾಗಿ ತೃತೀಯದ ಗುಳಿಕನು ಧೈರ್ಯ, ಸಾಹಸ ನೂತನ ಉದ್ಯಮ, ಸ್ವಾರ್ಜಿತ ವಿತ್ತ ಮತ್ತು ಸಹೋದರರೊಂದಿಗೆ ಕಲಹನೀಡುತ್ತಾನೆ.

## ೧೦. ಚತುರ್ಥದಲ್ಲಿ ಮಾಂದಿ

**ಪಾರಿಜಾತ ಮತ:-**

**ಹಿಬುಕಭವನ ಸಂಸ್ಥೇ ಮಂದಜೇ ವೀತವಿದ್ಯಾ ।**
**ಧನಗೃಹಸುಖ ಬಂಧೂ ಕ್ಷೇತ್ರಯಾತೋಽಟನ: ಸ್ಯಾತ್ ॥ ೨೫ ॥**

ಗುಳಿಕನು ಚತುರ್ಥದಲ್ಲಿ ಇದ್ದರೆ ವಿದ್ಯೆ ಇಲ್ಲದವನು, ಧನ, ಗೃಹ, ಸುಖ, ಬಂಧು, ವಾಹನ, ಭೂಮಿಗಳಿಲ್ಲದವನು, ಸಂಚಾರಿಯು ಆಗುತ್ತಾನೆ.

**ಆಯಾಸಸ್ಸುಖ ಹೀನಶ್ಚ ಶತ್ರುಮಾನ್ ಭಯ ವಿಹ್ವಲ ।**
**ಮಾತೃಪಕ್ಷಕ್ಷಯಕರೋ ಮಾಂದೌ ವೇಶ್ಮನಿ ಸಂಸ್ಥಿತೇ ॥ ೨೬ ॥**

ಗುಳಿಕನು ಚತುರ್ಥದಲ್ಲಿ ಇದ್ದರೆ ಆಯಾಸ ಉಳ್ಳವನು, ಸುಖವಿಲ್ಲದವನು, ಶತ್ರುಗಳು ಉಳ್ಳವನು, ಭಯದಿಂದ ವ್ಯಾಕುಲನಾದವನು, ತಾಯಿಯ ಬಳಗದವರಿಗೆ ನಾಶಕಾರಕನು ಆಗುತ್ತಾನೆ.

**ಫಲದೀಪಿಕಾ ಮತ:-**

**ಸುಹೃದಿ ಶನಿ ಸುತೇಸ್ಯಾದ್ಬಂಧು ಯಾನಾರ್ಥಹೀನ: ।**

ಶನಿಪುತ್ರನು ಚತುರ್ಥದಲ್ಲಿ ಇದ್ದರೆ ಬಂಧುಗಳು, ವಾಹನ ಮತ್ತು ಧನ ಇಲ್ಲದವನು ಆಗುತ್ತಾನೆ.

**ಪರಾಶರ ಮತ:-**

**ರೋಗೀ ಸುಖಪರಿತ್ಯಕ್ತ: ಸದಾ ಭವತಿ ಪಾಪಕೃತ್ ।**
**ಗುಲಿಕೇ ಸುಖಭಾವಸ್ಥೇ ವಾತಪಿತ್ತಾಧಿಕೋ ಭವೇತ್ ॥ ೨೭ ॥**

ಗುಳಿಕನು ಚತುರ್ಥದಲ್ಲಿ ಇದ್ದರೆ ರೋಗಗ್ರಸ್ತನು, ಸುಖವಿಲ್ಲದವನು ಯಾವಾಗಲೂ ಪಾಪಕೃತ್ಯಗಳಲ್ಲಿ ಆಸಕ್ತನು, ವಾತಪಿತ್ತಗಳಿಂದ ಪೀಡಿಸಲ್ಪಟ್ಟವನು ಆಗುತ್ತಾನೆ.

**ಪ್ರಶ್ನಮಾರ್ಗ ಮತ -**
**ಸುಖಾದಿಹೀನ: ಸುಖಗೇರಿ ಭೀತ: ॥ ೨೮ ॥**

ಗುಳಿಕನು ಚತುರ್ಥದಲ್ಲಿ ಇದ್ದರೆ ಸುಖ-ಸಂತೋಷಗಳು ಇಲ್ಲದವನು, ಶತ್ರುಗಳಿಗೆ ಹೆದರುವವನು ಆಗುತ್ತಾನೆ.

ಅನುಭವದಲ್ಲಿ ಕಂಡುಬಂದ ಫಲ -

ಚತುರ್ಥದ ಗುಳಿಕನಿಂದ ಗೃಹದಲ್ಲಿ ಅಶಾಂತಿ, ಗೃಹಕಲಹ, ಅಥವಾ ಗೃಹಸುಖದ ಅಭಾವ ಇರುತ್ತದೆ. ಸಂಬಂಧಿಕರಿಂದ ಹಾನಿ, ತಾಯಿಯೊಂದಿಗೆ ಕಲಹ, ಅಥವಾ ಮಾತೃಸುಖದ ನಾಶ, ಭೂವಿವಾದಗಳು, ದೇವತಾರಾಧನೆಯಲ್ಲಿ ವಿಘ್ನಗಳು, ವಾಹನದಿಂದ ಸಂಕಷ್ಟಗಳು, ಕರ್ಮದಲ್ಲಿ ಅಡೆ-ತಡೆ, ಎದೆನೋವು, ಜನ್ಮಸ್ಥಳ ತ್ಯಜಿಸಿ ಪರಊರಿನಲ್ಲಿ ವಾಸ ಇತ್ಯಾದಿ ಸಂಭವಿಸುತ್ತದೆ.

ಗುಳಿಕನು ಪಾಪಗ್ರಹದಿಂದ ದೃಷ್ಟ ಅಥವಾ ಯುತನಾಗಿ ಚತುರ್ಥದಲ್ಲಿ ಇದ್ದರೆ ಭೂಮಿ ಗೃಹಕಲಹದಿಂದ ಹಾನಿ ಆಗುತ್ತದೆ. ಸಂಬಂಧಿಕರೊಡನೆ ವೈರತ್ವದಿಂದ ಕೋರ್ಟು-ಕಛಹರೀ ವ್ಯವಹಾರದಲ್ಲಿ ಸಿಲುಕಿ ಆರ್ಥಿಕ

ಸಂಕಷ್ಟಗಳಿಗೀಡಾಗುತ್ತಾರೆ. ಗೃಹದಲ್ಲಿ ಅಗ್ನಿಯಿಂದ ಅಥವಾ ಕಳ್ಳರಿಂದ ಹಾನಿ ಸಂಭವಿಸುತ್ತದೆ. ಹೃದಯ ವಿಕಾರ, ಪುಪ್ಪುಸದ ವ್ಯಾಧಿಯಿಂದ ಪೀಡಿಸಲ್ಪಡುತ್ತಾರೆ. ವಾಹನಗಳಿಂದ ಅವಘಡ ಅಥವಾ ನಷ್ಟ ಆಗುತ್ತದೆ. ಉದ್ಯೋಗದಲ್ಲಿ ಮೇಲಧಿಕಾರಿಗಳೊಂದಿಗೆ ವಾದ-ವಿವಾದದಿಂದ ಪ್ರಗತಿಗೆ ತಡೆ ಉಂಟಾಗುತ್ತದೆ. ಕೈ ಕೆಳಗಿನವರಿಂದ ಕಿರುಕುಳ ಇರುತ್ತದೆ.

ಗುಳಿಕನು ಕುಜನಯುತಿಯಲ್ಲಿ ಚತುರ್ಥದಲ್ಲಿ ಇದ್ದಾಗ ಜನಿಸಿದವನು ಜನ್ಮಸ್ಥಳದಲ್ಲಿ ಪ್ರಗತಿಹೊಂದುವುದಿಲ್ಲ, ಗೃಹ ಸುಖದ ಅಭಾವ, ಪಿತ್ತವಿಕಾರ, ಹೃದಯದಲ್ಲಿ ಉರಿ ಇರುತ್ತದೆ. ಗುಳಿಕನು ಶನಿಯ ಯುತಿಯಲ್ಲಿ ಚತುರ್ಥದಲ್ಲಿ ಇದ್ದಾಗ, ತಾಯಿಗೆ ವಾತಪೀಡೆ ಅಥವಾ ಮಾತೃಸುಖದ ನಾಶ, ಕರ್ಮದಲ್ಲಿ ಆಗ್ಗಾಗ್ಗೆ ಬದಲಾವಣೆಗಳು, ಅಥವಾ ಸ್ಥಾನನಾಶ, ಗೃಹದಲ್ಲಿ ಅವ್ಯವಸ್ಥೆ ಕಂಡುಬರುತ್ತದೆ. ಗುಳಿಕನು ರಾಹುವಿನ ಯುತಿಯಲ್ಲಿ ಚತುರ್ಥದಲ್ಲಿ ಇದ್ದಾಗ ಸ್ತ್ರೀ ಶಾಪ, ನೀಚರಿಂದ ಅವಮಾನ, ಕಳ್ಳತನದಿಂದ ಸಂಪತ್ತಿನ ಹಾನಿ, ವಿದ್ಯಾಭ್ಯಾಸದಲ್ಲಿ ವಿಘ್ನಗಳು, ಅಪಕೀರ್ತಿ ಉಂಟಾಗುತ್ತದೆ. ಇವರ ಪೂರ್ವಜರು ಸ್ತ್ರೀಯ ಅಥವಾ ಪರಧನಾದಿಗಳನ್ನು ವಂಚನೆಯಿಂದ ಸಂಚಯಿಸಿರುತ್ತಾರೆ, ಅಥವಾ ಸ್ತ್ರೀಯರಿಗೆ ದುಃಖ-ಕಷ್ಟಾದಿಗಳನ್ನು ನೀಡಿರುತ್ತಾರೆ. ತತ್ಪರಿಣಾಮ ಹೇತುವಿನಿಂದ ಇವರ ಗೃಹದಲ್ಲಿ ಅಶಾಂತಿ, ಸ್ತ್ರೀಯರಿಗೆ ಅಸುಖ, ಅಥವಾ ದೋಷಪೀಡಿತ ಸಂತಾನ ಆಗುತ್ತದೆ. ಗುಳಿಕನು ಕೇತುವಿನ ಯುತಿಯಲ್ಲಿ ಚತುರ್ಥದಲ್ಲಿ ಇದ್ದಾಗ ಗೃಹಛಿದ್ರ, ದುಷ್ಟಶಕ್ತಿಗಳಿಂದ ಪೀಡೆ, ತಾಯಿಗೆ ಗುಣ ಪಡಿಸಲು ಕಷ್ಟವಾದ ವ್ಯಾಧಿ, ವಿದ್ಯಾಭ್ಯಾಸದಲ್ಲಿ ವಿಘ್ನಗಳು, ದೈವಹೇತು ಇತ್ಯಾದಿ ಕಂಡುಬರುತ್ತದೆ.

ಗುಳಿಕನು ಶುಭಗ್ರಹನಿಂದ ದೃಷ್ಟ, ಅಥವಾ ಯುತನಾಗಿ ಚತುರ್ಥದಲ್ಲಿ ಇದ್ದಾಗ ಅಲ್ಪ- ಸ್ವಲ್ಪ ವಿಘ್ನಗಳು ಅಥವಾ ಕಾಲಹರಣ ಸಂಭವಿಸಿದರೂ ಗೃಹದಲ್ಲಿ ಶುಭಸಮಾರಂಭಗಳು ಜರಗುತ್ತವೆ. ವಿಳಂಬದಿಂದ ವಾಹನಸುಖ ದೇಶ ವಿದೇಶ ಪ್ರಯಾಣ ಲಭಿಸುತ್ತದೆ. ಇವರ ಹಿರಿಯರಿಂದ ಆರಾಧಿಸಲ್ಪಡುವ ದೈವದ ಕೃಪೆಯಿಂದ ಇವರು ಪ್ರಗತಿ ಹೊಂದುತ್ತಾರೆ.

ಸಾಮಾನ್ಯವಾಗಿ ಚತುರ್ಥದ ಗುಳಿಕನು ಗೃಹದಲ್ಲಿ ಅಶಾಂತಿ, ಮಾತೃಸುಖದ ಅಭಾವ. ವಿದ್ಯಾಭ್ಯಾಸದಲ್ಲಿ ಅಡ-ತಡೆ ನೀಡುತ್ತಾನೆ.

## ೧೧. ಪಂಚಮದಲ್ಲಿ ಮಾಂದಿ

**ಬುದ್ಧಿ ಪುತ್ರಾರ್ಥ ಹೀನಶ್ಚ ಗುರುದೇವಾದಿ ನಿಂದಕಃ ।**
**ವ್ಯಸನೀ ಶೂಲರೋಗಿ ಚ ಗುಳಿಕೇ ಪಂಚಮಸ್ಥಿತೇ ॥ ೨೯ ॥**

ಗುಳಿಕನು ಪಂಚಮದಲ್ಲಿ ಇದ್ದರೆ ಬುದ್ಧಿಹೀನನು, ಪುತ್ರ ಮತ್ತು ಧನ ಇಲ್ಲದವನು, ಗುರುಹಿರಿಯರು ಮತ್ತು ದೇವರನ್ನು ನಿಂದಿಸುವವನು, ವ್ಯಸನವಂತನು, ಶೂಲರೋಗ ಪೀಡಿತನು ಆಗುತ್ತಾನೆ.

**ಫಲದೀಪಿಕಾ ಮತ:-**

**ಚಪಲಮತಿರಸೂತಾಪತ್ಯತೋಲ್ಪ ಜೀವಿ ಸ ಶೂಲೀ ।**

ಗುಳಿಕನು ಪಂಚಮದಲ್ಲಿ ಇದ್ದರೆ ಚಂಚಲ ಬುದ್ಧಿಯುವನು, ಮಕ್ಕಳಿಲ್ಲದವನು, ಶೂಲರೋಗದಿಂದ ಬಳಲುವವನು, ಅಲ್ಪತನದಿಂದ ಜೀವಿಸುವವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:-**

**ತನಯ ಭವನಯಾತೇ ಮಂದಸೂನೌ ವಿಶೀಲಃ ।**
**ಚಲಮತಿರಘುಬುದ್ಧಿಃ ಸ್ವಲ್ಪಪುತ್ರೋಽಲ್ಪಜೀವೀ ॥ ೩೦ ॥**

ಗುಳಿಕನು ಪಂಚಮದಲ್ಲಿ ಇದ್ದರೆ ಶೀಲವನ್ನು ಕಳಕೊಂಡುವನು, ಚಂಚಲ ಮತಿಯು, ದುಷ್ಟಬುದ್ಧಿಯವನು, ಸ್ವಲ್ಪ ಪುತ್ರರು ಉಳ್ಳವನು, ಅಲ್ಪತನದಿಂದ ಜೀವಿಸುವವನು ಅಲ್ಪಾಯುವು ಆಗುತ್ತಾನೆ.

**ಪರಾಶರ ಮತ:-**

**ವಿಸ್ಮೃತಿರ್ವಿಧನೋಽಲ್ಪಾಯುರ್ದ್ವೇಷೀ ಕ್ಷುದ್ರೋ ನಪುಂಸಕಃ ।**
**ಗುಲಿಕೇ ಸುತಭಾವಸ್ಥೇ ಸ್ತ್ರೀಜಿತೋ ನಾಸ್ತಿಕೋ ಭವೇತ್ ॥ ೩೧ ॥**

ಗುಳಿಕನು ಪಂಚಮದಲ್ಲಿ ಇದ್ದರೆ ಪರರನ್ನು ನಿಂದಿಸುವವನು, ಧನವನ್ನು ಕಳಕೊಂಡವನು, ಅಲ್ಪಾಯುಷಿಯು, ದ್ವೇಷಭಾವನೆಯಿಂದ ಕೂಡಿದವನು, ಕ್ಷುದ್ರಕಾರ್ಯಗಳನ್ನು ಮಾಡುವವನು, ನಪುಂಸಕನು, ಸ್ತ್ರೀಯರ ಪ್ರಭಾವಕ್ಕೆ ಒಳಗಾದವನು, ನಾಸ್ತಿಕನು ಆಗುತ್ತಾನೆ.

## ಪ್ರಶ್ನಮಾರ್ಗ ಮತ:-

## ಗುರ್ವಾದಿನಿಂದಾಕೃದನಾತ್ಮಜ: ಸ್ಯಾತ್ ಶೂಲೀ ಸುತಸ್ಥೇ

ಗುಳಿಕನು ಪಂಚಮದಲ್ಲಿ ಇದ್ದರೆ ಗುರುಹಿರಿಯರನ್ನು ನಿಂದಿಸುವವನು, ಮಕ್ಕಳಾಗಲು ಪ್ರತಿಬಂಧಕ ಇರುವವನು, ಉದರವ್ಯಾಧಿಯಿಂದ ಪೀಡಿಸಲ್ಪಡುವವನು ಆಗುತ್ತಾನೆ.

## ಅನುಭವದಲ್ಲಿ ಕಂಡುಬಂದ ಫಲ:-

ಗುಳಿಕನು ಪಂಚಮದಲ್ಲಿ ಇದ್ದಾಗ ಜನಿಸಿದವರು ಮಾನಸಿಕ ವ್ಯಥೆಯಿಂದ ಪೀಡಿತರು, ಬುದ್ಧಿವಂತರಾದರೂ ಚಿಂತಿತ ವಿಚಾರಗಳನ್ನು ಕಾರ್ಯಗತಗೊಳಿಸಲು ಹಿಂಜರಿಯುತ್ತಾರೆ. ಅಪಕೀರ್ತಿ, ಅಪಜಯದ ಭಯ ಇರುತ್ತದೆ. ಧಾರ್ಮಿಕ ಕಾರ್ಯಗಳಲ್ಲಿ ವಿಘ್ನ ಉಂಟಾಗುತ್ತದೆ. ಗುರುಹಿರಿಯರನ್ನು ಟೀಕಿಸುವ ಸ್ವಭಾವ ಇವರಲ್ಲಿ ಇರುತ್ತದೆ. ಅಜೀರ್ಣ, ಉದರಶೂಲೆ ಮತ್ತು ಪಿತ್ತಭಾಧೆಯಿಂದ ಪೀಡಿಸಲ್ಪಡುತ್ತಾರೆ. ಚಂಚಲ ವಿಚಾರಗಳಿಂದ ಪ್ರಗತಿಗೆ ತಡೆ ಉಂಟಾಗುತ್ತದೆ.

ಗುಳಿಕನು ಪಾಪಗ್ರಹನಿಂದ ದೃಷ್ಟ ಅಥವಾ ಯುತನಾಗಿ ಪಂಚಮದಲ್ಲಿ ಇದ್ದರೆ, ಮಂದಬುದ್ಧಿ, ಅಥವಾ ಮೂಢತ್ವ, ವಿಚಾರಶೂನ್ಯತೆ, ಮಾನಸಿಕ ಭಯ ಮತ್ತು ಅಸ್ಥಿರ ವಿಚಾರಗಳಿಂದ ಪೀಡಿಸಲ್ಪಡುತ್ತಾರೆ. ಸಂತಾನನಷ್ಟ ಅಥವಾ ಸಂತಾನ ಚಿಂತೆ, ಮತ್ತು ಮಕ್ಕಳಿಂದ ಹಾನಿ ಸಂಭವಿಸುತ್ತದೆ. ಉದರಶೂಲೆಯಿಂದ ಪೀಡಿಸಲ್ಪಡುತ್ತಾರೆ. ಶಸ್ತ್ರಚಿಕಿತ್ಸೆ ಸಂಭವನೀಯ.

ಗುಳಿಕನು ಕುಜನ ಯುತಿಯಲ್ಲಿ ಪಂಚಮದಲ್ಲಿ ಇದ್ದಾಗ ಜನಿಸಿದವರಲ್ಲಿ ಶೀಘ್ರಕೋಪ, ತನ್ನ ವಾದವನ್ನೇ ಸಮರ್ಥಿಸುವ ಛಲಸ್ವಭಾವ, ಕ್ರೂರ ವಿಚಾರಗಳು ಇರುತ್ತದೆ. ಸಂತಾನನಷ್ಟ ಅಥವಾ ಮಕ್ಕಳಿಗೆ ಉಷ್ಣಪ್ರಕೋಪ ಮತ್ತು ಅಗ್ನಿಯಿಂದ ಹಾನಿ ಸಂಭವಿಸುತ್ತದೆ. ಉದರ ವ್ಯಾಧಿಯಿಂದ ಶಸ್ತ್ರ ಚಿಕಿತ್ಸೆ ಸಂಭವಿಸುತ್ತದೆ. ತಂದೆ-ಮಕ್ಕಳಲ್ಲಿ ವಾದ-ವಿವಾದ ಅಥವಾ ಕಲಹ ಉಂಟಾಗುತ್ತದೆ. ಗುಳಿಕನು ಶನಿಯಯುತಿ ಅಥವಾ ದೃಷ್ಟಿಯಲ್ಲಿ ಇದ್ದಾಗ ಮಂದಬುದ್ಧಿ, ಮಾನಸಿಕ ಚಾಂಚಲ್ಯ, ನಾಸ್ತಿಕತೆ, ಆಲಸ್ಯತನ ಮತ್ತು ಭಯದಿಂದ ಪೀಡಿಸಲ್ಪಡುತ್ತಾರೆ. ಮಕ್ಕಳ ಆರೋಗ್ಯ ಉತ್ತಮ ಇರುವುದಿಲ್ಲ. ಮಕ್ಕಳಲ್ಲಿ ಅಂಗವಿಕಲತೆ ಅಥವಾ

ಬುದ್ಧಿಮಾಂದ್ಯ ಇರಬಹುದು. ಗುಳಿಕನು ರಾಹುವಿನ ಯುತಿಯಲ್ಲಿ ಇದ್ದಾಗ ದುಷ್ಟ ವಿಚಾರಗಳಿಂದ ಕೂಡಿದವರು, ಹಠಸ್ವಭಾವ, ಸ್ವಾರ್ಥಪ್ರಿಯತೆ ಇರುತ್ತದೆ. ಇವರಿಗೆ ಸರ್ಪಶಾಪದಿಂದ ಸಂತತಿ ದೋಷ ಇರುತ್ತದೆ. ಗುಳಿಕನು ಕೇತುವಿನ ಯುತಿಯಲ್ಲಿ ಪಂಚಮದಲ್ಲಿ ಇದ್ದಾಗ ದುಷ್ಟಶಕ್ತಿಯಿಂದ ಪೀಡಿಸಲ್ಪಡುತ್ತಾರೆ. ಅಸಂತತಿ ಅಥವಾ ದೋಷಯುಕ್ತ ಸಂತಾನ ಜನಿಸುತ್ತದೆ.

ಗುಳಿಕನು ಶುಭಗ್ರಹನಿಂದ ದೃಷ್ಟ ಅಥವಾ ಯುತನಾಗಿ ಪಂಚಮದಲ್ಲಿದ್ದರೆ ಅಶುಭಫಲಗಳು ಕ್ಷೀಣಿಸುತ್ತವೆ. ಜಾತಕನು ಬುದ್ಧಿವಂತನು, ವಿಚಾರ ವಿಮರ್ಶಣಾಶಕ್ತಿ ಮತ್ತು ಸಂತಾನಸುಖ ಉಳ್ಳವನು, ಸ್ವಪ್ರತಿಭೆಯಿಂದ ಧನಸಂಪತ್ತನ್ನು ಗಳಿಸುತ್ತಾನೆ. ಸ್ಥಾನ-ಮಾನ, ಕೀರ್ತಿ ಲಭಿಸುತ್ತದೆ.

ಸಾಮಾನ್ಯವಾಗಿ ಪಂಚಮದ ಗುಳಿಕನು ಸಂತಾನಚಿಂತೆ, ಉದರವ್ಯಾಧಿ ಮತ್ತು ಚಂಚಲ ವಿಚಾರಗಳನ್ನು ನೀಡುತ್ತಾನೆ.

## ದತ್ತಪುತ್ರ ಯೋಗ:

**ಮಾಂದಂ ಸುತರ್ಕ್ಷ್ಗಂ ಯದಿವಾಃಥಬೌಧಂ ಮಾಂದ್ಯರ್ಕ ಪುತ್ರಾನ್ವಿತ ವೀಕ್ಷಿತಂ ಚೇತ್ । ದತ್ತಾತ್ಮಜಃ ಸ್ಯಾದುದಯಾಸ್ತನಾಥ ಸಂಬಂಧಹೀನೋ ವಿಬಲ: ಸುತೇಶ: ॥ ೩೨ ॥ ಫಲದೀಪಿಕಾ ॥**

ಶನಿಕ್ಷೇತ್ರ (ಮಕರ, ಕುಂಭ), ಅಥವಾ ಬುಧಕ್ಷೇತ್ರ (ಕನ್ಯಾ, ಮಿಥುನ), ಪಂಚಮಭಾವವಾಗಿ ಶನಿ ಮತ್ತು ಮಾಂದಿಯಿಂದ ಕೂಡಿದ್ದರೆ ಅಥವಾ ನೋಡಲ್ಪಟ್ಟರೆ ದತ್ತಪುತ್ರಯೋಗ ಆಗುತ್ತದ.

ಕನ್ಯಾ ಮತ್ತು ತುಲಾ ಲಗ್ನಗಳಿಗೆ ಶನಿಕ್ಷೇತ್ರವು ಪಂಚಮ, ಮತ್ತು ಕುಂಭ-ವೃಷಭ ಲಗ್ನಗಳಿಗೆ ಬುಧಕ್ಷೇತ್ರವು ಪಂಚಮ ಆಗಿರುತ್ತದೆ. ಈ ನಾಲ್ಕು ಲಗ್ನದವರಿಗೆ ಪಂಚಮ ಅಥವಾ ಲಾಭದಲ್ಲಿ ಶನಿ-ಗುಳಿಕಯುತಿ ಇದ್ದರೆ ದತ್ತಪುತ್ರಯೋಗ ಆಗುತ್ತದೆ.

ಪಂಚಮಾಧಿಪತಿಯು ನಿರ್ಬಲನಾಗಿ ಲಗ್ನಾಧಿಪತಿ ಮತ್ತು ಸಪ್ತಮಾಧಿಪತಿಯ ಸಂಬಂಧವಿಲ್ಲದೇ ಇದ್ದರೆ ದತ್ತಪುತ್ರಯೋಗ ಆಗುತ್ತದೆ.

**ಸಂತಾನ ದೋಷಃ**

**ಸ್ವರ್ಭಾನೌ ಸುತಗೇ ಸುತೇಶಸಹಿತೇ ಸರ್ಪಸ್ಯ ಶಾಪಾತ್ತಥಾ ಕೇತೌಬ್ರಾಹ್ಮಣಶಾಪತಶ್ಚ ಗುಲಿಕೇ ಪ್ರೇತೋತ್ಥ ಶಾಪಂ ವದೇತ್ । ಶುಕ್ರೇಂದೂ ಗುಲಿಕಾನ್ವಿತೌ ಯದಿ ವಧೂ ಗೋಹತ್ಯ ಮಾಹುಃ ಸುತೇ ಜೀವೋವಾಥ ಶಿಖೀ ಸಮಾಂದಿರಿಹ ಚೇದ್ಭೂದೇವ ಹತ್ಯಾಽಸುತಃ ॥ ೩೩ ॥ ಫಲದೀಪಿಕಾ ॥**

ರಾಹುವು ಪಂಚಮದಲ್ಲಿದ್ದರೆ ಅಥವಾ ಪಂಚಮಾಧಿಪತಿಯ ಯುತಿ-ಯಲ್ಲಿದ್ದರೆ ಸರ್ಪಶಾಪದಿಂದ ಸಂತತಿದೋಷ ಉಂಟಾಗುತ್ತದೆ.

ಕೇತುವು ಪಂಚಮದಲ್ಲಿದ್ದರೆ ಅಥವಾ ಪಂಚಮಾಧಿಪತಿಯ ಯುತಿ-ಯಲ್ಲಿದ್ದರೆ ಬ್ರಾಹ್ಮಣ ಶಾಪದಿಂದ ಸಂತತಿದೋಷ ಉಂಟಾಗುತ್ತದೆ.

ಮಾಂದಿಯು ಪಂಚಮದಲ್ಲಿದ್ದರೆ ಅಥವಾ ಪಂಚಮಾಧಿಪತಿಯ ಯುತಿಯಲ್ಲಿದ್ದರೆ ಪ್ರೇತಶಾಪದಿಂದ ಸಂತತಿದೋಷ ಉಂಟಾಗುತ್ತದೆ.

ಶುಕ್ರ ಮತ್ತು ಚಂದ್ರನು ಮಾಂದಿಯ ಯುತಿಯಲ್ಲಿ ಪಂಚಮದಲ್ಲಿದ್ದರೆ ಅಥವಾ ಪಂಚಮವನ್ನು ನೋಡಿದರೆ ಸ್ತ್ರೀಹತ್ಯದೋಷ ಅಥವಾ ಗೋಹತ್ಯ ದೋಷದಿಂದ ಸಂತತಿದೋಷ ಉಂಟಾಗುತ್ತದೆ.

ಗುರು ಅಥವಾ ಕೇತುವು ಮಾಂದಿಯ ಯುತಿಯಲ್ಲಿ ಪಂಚಮದಲ್ಲಿದ್ದರೆ ಅಥವಾ ಪಂಚಮವನ್ನು ನೋಡಿದರೆ ಬ್ರಾಹ್ಮಣಹತ್ಯಾ ದೋಷದಿಂದ ಸಂತಾನ ಆಗುವುದಿಲ್ಲ.

ಮೇಲಿನ ಎಲ್ಲಾ ಯೋಗಗಳಲ್ಲಿ ಪಂಚಮಾಧಿಪತಿಯು ನಿರ್ಬಲನಾದರೆ ಸಂತತಿ ದೋಷವು ಪ್ರಬಲ ಆಗುತ್ತದೆ.

**ಕಾಮಸ್ಥಾನಾಧಿಪೇ ದುಃಸ್ಥೇ ಪುತ್ರೇ ಚಂದ್ರ ಸಮನ್ವಿತೇ । ಮಂದ ಮಾಂದಿ ಯುತೇ ಲಗ್ನೇ ಪ್ರೇತಶಾಪಾತ್ಸುತಕ್ಷಯಃ ॥ ೩೪ ॥**

ಸಪ್ತಮಾಧಿಪತಿಯು ದುಸ್ಥಾನದಲ್ಲಿ (ಷಷ್ಠ, ಅಷ್ಟಮ, ದ್ವಾದಶ), ಚಂದ್ರನು ಪಂಚಮದಲ್ಲಿ, ಶನಿ ಮತ್ತು ಮಾಂದಿಯು ಲಗ್ನದಲ್ಲಿದ್ದರೆ ಪ್ರೇತ ಶಾಪದಿಂದ ಸಂತಾನನಾಶ ಸಂಭವಿಸುತ್ತದೆ.

## ೧೨. ಷಷ್ಠದಲ್ಲಿ ಮಾಂದಿ

**ಜಾತಕ ಪಾರಿಜಾತ ಮತ:-**

**ಬಹುರಿಪುಗಣಹಂತಾ ಭೂತವಿದ್ಯಾ ವಿನೋದೀ ।**
**ಯದಿರಿಪುಗ್ರಹಯಾತೇ ಮಂದಪುತ್ರೇ ತು ಶೂರಃ ॥ ೩೫ ॥**

ಷಷ್ಠದಲ್ಲಿ ಗುಳಿಕನಿದ್ದರೆ ಹಲವಾರು ಶತ್ರುಗಳನ್ನು ನಾಶಮಾಡುವವನು, ಗೂಢವಿದ್ಯೆಗಳಲ್ಲಿ ಪ್ರವೀಣನು, ಹಾಸ್ಯ ವಿನೋದಗಳಿಂದ ಕೂಡಿದವನು. ಪರಾಕ್ರಮಿಯು ಆಗುತ್ತಾನೆ.

**ಪರಾಕ್ರಮೀ ಬಲಾಢ್ಯಶ್ಚ ಪರೇಷಾಂ ವ್ಯಸನಪ್ರಿಯ: ।**
**ಜ್ಞಾತಿದ್ವೇಷಕರ: ಕ್ರೋಧೀ ಗುಳಿಕೇ ಷಷ್ಠಸಂಸ್ಥಿತೇ ॥ ೩೬ ॥**

ಗುಳಿಕನು ಷಷ್ಠದಲ್ಲಿದ್ದರೆ ಪರಾಕ್ರಮಿಯು, ಬಲಿಷ್ಠನು, ಪರರ ದುಃಖ ದಿಂದ ಸಂತೋಷ ಪಡುವವನು, ದಾಯಾದಿಗಳಲ್ಲಿ ಹಗೆತನ ಉಳ್ಳವನು, ಕೋಪಿಷ್ಠನು ಆಗುತ್ತಾನೆ.

**ಪರಾಶರ ಮತ:-**

**ವೀತಶತ್ರು: ಸುಪುಷ್ಟಾಂಗೋ ರಿಪುಸ್ಥಾನೇ ಯಮಾತ್ಮಜೇ ।**
**ಸುದೀಪ್ತ: ಸಂಮತ: ಸ್ತ್ರೀಣಾಂ ಸೋತ್ಸಾಹ: ಸುದೃಢೋಹಿತ: ॥ ೩೭ ॥**

ಶನಿಯ ಪುತ್ರನಾದ ಗುಳಿಕನು ಷಷ್ಠದಲ್ಲಿದ್ದರೆ ಶತ್ರುಗಳನ್ನು ಸೋಲಿಸುವವನು, ಹೃಷ್ಟಪುಷ್ಟ ಅಂಗಾಂಗ ಉಳ್ಳವನು, ತೇಜಸ್ವಿಯು, ಸ್ತ್ರೀಯರಿಂದ ಪ್ರೀತಿಸಲ್ಪಡುವವನು, ಉತ್ಸಾಹವಂತನು, ಸ್ಥಿರವಾದ ವಿಚಾರಗಳಿಂದ ಕೂಡಿದವನು ಆಗುತ್ತಾನೆ.

**ಪ್ರಶ್ನಮಾರ್ಗ ಮತ:-**

**ರಿಪುಗೇ ನಿಜದ್ವಿಟ್ ।**

ಗುಳಿಕನು ಷಷ್ಠದಲ್ಲಿದ್ದರೆ ಸಜ್ಜನರೊಡನೆ ಶತ್ರುತ್ವ ಉಂಟಾಗುತ್ತದೆ.

## ಅನುಭವದಲ್ಲಿ ಕಂಡುಬಂದ ಫಲ:-

ಷಷ್ಠದ ಮಾಂದಿಯಿಂದ ಕರ್ಮಕ್ಷೇತ್ರದಲ್ಲಿ ಹಲವಾರು ಶತ್ರುಗಳು ಜಾತಕನ ಅವನತಿಗೆ ಪ್ರಯತ್ನಿಸಿ ವಿಫಲರಾಗುತ್ತಾರೆ. ಜಾತಕನು ಬಲಿಷ್ಠನಾದರೂ ಅವನಿಗೆ ರೋಗಭೀತಿ, ಕೃತ್ರಿಮಭಯ ಮತ್ತು ಸಂಶಯಾಸ್ಪದ ಪ್ರವೃತ್ತಿ ಇರುತ್ತದೆ. ಇವರಲ್ಲಿ ಕಾರ್ಯದಕ್ಷತೆ, ಕರ್ಮದಕ್ಷತೆ, ಕರ್ಮಕುಶಲತೆ, ಶಿಸ್ತುಪಾಲನೆ, ಹಾಗೂ ಶಿಸ್ತಿನ ಉಲ್ಲಂಘನೆಯನ್ನು ಮಾಡಿದವರನ್ನು ತಿರಸ್ಕರಿಸುವ ಸ್ವಭಾವ ಇರುವುದರಿಂದ ಶತ್ರುಗಳು ಉಂಟಾಗುತ್ತಾರೆ. ಆದರೆ ನಿರ್ಭಯರಾಗಿ ಶತ್ರುಗಳನ್ನು ಲೆಕ್ಕಿಸದೆ ಮುಂದುವರೆದು ಯಶಸ್ಸನ್ನು ಗಳಿಸುತ್ತಾರೆ.

ಷಷ್ಠದಗುಳಿಕನು ಪಾಪಗ್ರಹದ ಯುತಿ ಅಥವಾ ದೃಷ್ಟಿಯಲ್ಲಿದ್ದರೆ, ಶತ್ರಪೀಡೆ, ಗೂಢವ್ಯಾಧಿಗಳು, ಸ್ತ್ರೀಯರಿಂದ ತಿರಸ್ಕಾರ ಉಂಟಾಗುತ್ತದೆ. ಗುಳಿಕನು ಕುಜನಯುತಿಯಲ್ಲಿದ್ದಾಗ ಸಹೋದರರಲ್ಲಿ ವೈರತ್ವ, ಉಷ್ಣವಿಕಾರಗಳು, ಅಗ್ನಿಯಿಂದ ಅಥವಾ ಯಂತ್ರಗಳಿಂದ ಹಾನಿ, ಶತ್ರುಗಳಿಂದ ಪೀಡೆ ಮತ್ತು ಋಣಬಾಧೆಯಿಂದ ಪೀಡಿಸಲ್ಪಡುತ್ತಾರೆ. ಶನಿಯ ಯುತಿಯಲ್ಲಿದ್ದಾಗ ನೀಚಜನರೊಡನೆ ಶತ್ರುತ್ವದಿಂದ ಅವಮಾನ. ಪರಿಶ್ರಮದಿಂದ ದುಡಿದರೂ ಕರ್ಮಕ್ಕೆತಕ್ಕ ಪ್ರತಿಫಲ ಲಭಿಸದೆ, ಸಂಕಷ್ಟಗಳಿಗೀಡಾಗುತ್ತಾರೆ. ರಾಹುವಿನ ಯುತಿಯಲ್ಲಿ ಗುಳಿಕನಿದ್ದಾಗ ಶತ್ರುಪೀಡೆ, ಸರ್ಪಸುತ್ತು, ವಿಷಭಯ ಮತ್ತು ಆಗ್ಗಾಗ್ಗೆ ವ್ಯಾಧಿ ಸಂಕಷ್ಟಗಳಿಂದ ಪೀಡಿಸಲ್ಪಡುತ್ತಾರೆ. ಕೇತುವಿನ ಯುತಿಯಲ್ಲಿ ಗುಳಿಕ ನಿದ್ದಾಗ ಕೃತ್ರಿಮಭೀತಿ ಮತ್ತು ನಿರ್ಣಯಿಸಲಸಾಧ್ಯವಾದ ವ್ಯಾಧಿಗಳಿಂದ ಪೀಡಿಸಲ್ಪಡುತ್ತಾರೆ.

ಷಷ್ಠದ ಗುಳಿಕನು ಶುಭಗ್ರಹದ ಯುತಿ ಅಥವಾ ದೃಷ್ಟಿಯಲ್ಲಿದ್ದರೆ ಸಂಶೋಧನಾಪ್ರವೃತ್ತಿ, ಕರ್ಮದಲ್ಲಿ ಯಶಸ್ಸು, ಪ್ರಯಾಣಗಳಿಂದ ಲಾಭ, ಅಧಿಕಾರ ಇತ್ಯಾದಿಗಳನ್ನು ನೀಡುತ್ತಾನೆ. ಗುಳಿಕನು ಗುರುವಿನ ಯುತಿಯಲ್ಲಿದ್ದಾಗ ಜನಿಸಿದವನು ಹಲವಾರು ಶತ್ರುಗಳು ಉಳ್ಳವನು. ಆಗ್ಗಾಗ್ಗೆ ರೋಗದಿಂದ ಪೀಡಿಸಲ್ಪಟ್ಟವನು ಆಗುತ್ತಾನೆ. ಧಾರ್ಮಿಕ ಕಾರ್ಯಕಲಾಪಗಳಲ್ಲಿ ಅಥವಾ ಶುಭಸಮಾರಂಭಗಳಲ್ಲಿ ವಿಘ್ನಗಳು ಉಂಟಾಗುತ್ತವೆ, ಗುಳಿಕ-ಬುಧ ಯುತಿಯು ಸೋದರಮಾವನೊಂದಿಗೆ ಕಲಹ ಅಥವಾ ಸೋದರಮಾವನಿಗೆ ಅನಾರೋಗ್ಯ

ನೀಡುತ್ತದೆ. ಗುಳಿಕ-ಚಂದ್ರ ಯುತಿಯಲ್ಲಿ ಬಾಲಾರಿಷ್ಠ, ಮಾನಸಿಕ ಅಶಾಂತಿ, ಚಿಂತಿತ ವಿಚಾರಗಳನ್ನು ಕಾರ್ಯಗತಗೊಳಿಸಲು ಅಡ್ಡಿ ಆತಂಕ ಉಂಟಾಗುತ್ತದೆ. ಗುಳಿಕ-ಶುಕ್ರಯುತಿಯಲ್ಲಿ ಸುಖ-ಸಂಪತ್ತಿನ ಪ್ರಾಪ್ತಿಗೆ ನಿರಂತರ ಪ್ರಯತ್ನಿಸುತ್ತಾರೆ.

ಸಾಮಾನ್ಯವಾಗಿ ಷಷ್ಠದ ಗುಳಿಕನು ರೋಗಭಯ, ಶತ್ರುಗಳ ಕಾಟ, ಮತ್ತು ಕರ್ಮದಲ್ಲಿ ಅಭಿವೃದ್ಧಿಯನ್ನು ನೀಡುತ್ತಾನೆ.

**ಗುಳಿಕನಿಂದ ಸೂಚಿತ ರೋಗಗಳು**

**ಪ್ರೇತೋತ್ಥಂ ಚ ಭಯಂ ವಿಷಂ ಚ ಗುಲಿಕೋ ದೇಹಾರ್ತಿಮಾಶೌಚಕಮ್ ॥ ಫ. ದೀ. ॥**

1. ಪ್ರೇತಬಾಧೆ ಮತ್ತು ಭಯ, 2. ವಿಷಹೇತು, 3. ಶಾರೀರಿಕ ಪೀಡೆ, 4. ಮರಣದಿಂದ ಉಂಟಾದ ಅಶೌಚ ಇವುಗಳನ್ನು ಗುಳಿಕನು ಸೂಚಿಸುತ್ತಾನೆ.

**''ಮಾಂದಿರ್ಹಿಕ್ಕಾಮಪಿ ಶಿರೋದ್ಗಮಮ್''** ಮಾಂದಿಯು ಬಿಕ್ಕಳಿಕೆ ಮತ್ತು ನರಗಳಲ್ಲಿ ರೋಗದ ಉತ್ಪತ್ತಿಯನ್ನು ನೀಡುತ್ತಾನೆ.

**ಮಂದಮಾಂದ್ಯಗು ಸಂಯುಕ್ತೇ ಪಂಚಮೇ ಶುಭವರ್ಜಿತೇ ।**
**ತದಿಶೇ ಪಾಪಸಂದೃಷ್ಟೇ ವಿಸ್ಮೃತಿ: ಪ್ರಾಯಶೋ ಭವೇತ್ ॥**

ಶನಿ, ಮಾಂದಿ ಮತ್ತು ರಾಹುವು, ಪಂಚಮದಲ್ಲಿ, ಶುಭಗ್ರಹರಿಂದ ನೋಡಲ್ಪಡದೆ ಇರಬೇಕು. ಮತ್ತು ಪಂಚಮಾಧಿಪನು ಪಾಪಗ್ರಹರಿಂದ ನೋಡಲ್ಪಟ್ಟರೆ ಜಾತಕನಿಗೆ ವಿಸ್ಮೃತಿ ಆಗುತ್ತದೆ.

**ಷಷ್ಠೇ ಶನೌ ಸಗುಲಿಕೇ ರವ್ಯಾರಫಣಿವೀಕ್ಷಿತೇ । ಶುಭೈರ್ನ ದೃಷ್ಟೇ ಯುಕ್ತೇ ವಾ ಶ್ವಾಸಕಾಸಕ್ಷಯಾದಿಯುಕ್ ॥ ಚಿಂತಾಮಣಿ ॥**

ಗುಳಿಕನು ಶನಿಯೊಂದಿಗೆ ಷಷ್ಠಭಾವದಲ್ಲಿದ್ದು ರವಿ, ಕುಜ ಮತ್ತು ರಾಹುವಿನಿಂದ ನೋಡಲ್ಪಡಬೇಕು, ಶುಭಗ್ರಹರ ಯುತಿ ಅಥವಾ ದೃಷ್ಟಿ ಇರಬಾರದು. ಜಾತಕನಿಗೆ ಉಬ್ಬಸ, ಕೆಮ್ಮು ಮತ್ತು ಕ್ಷಯರೋಗ ಆಗುತ್ತದೆ.

## ೧೩. ಸಪ್ತಮದಲ್ಲಿ ಮಾಂದಿ

**ಅನಾಚಾರರತ: ಕಾಮೀ ಜಾಯಘ್ನ: ಕುಲದೂಷಕ: ।**
**ವಿಷದೃಷ್ಟಿಶ್ಚ ದುರ್ಬುದ್ಧಿರ್ಗುಳಿಕೇ ಸಪ್ತಮಸ್ಥಿತೇ ॥ ೩೮ ॥**

ಗುಳಿಕನು ಸಪ್ತಮದಲ್ಲಿದ್ದರೆ ಅನಾಚಾರಗಳನ್ನು ಮಾಡುವವನು ಅತ್ಯಂತ ಕಾಮಿಯು, ಪತ್ನಿಯನ್ನು ಪೀಡಿಸುವವನು, ತನ್ನಕುಲದವರನ್ನು ದ್ವೇಷಿಸುವವನು, ವಿಷದೃಷ್ಟಿಉಳ್ಳವನು, ದುರ್ಬುದ್ಧಿಯಿಂದ ಕೂಡಿದವನು ಆಗುತ್ತಾನೆ.

**ಫಲದೀಪಿಕಾ ಮತ:-**

**ಕಲತ್ರಸಂಸ್ಥೇ ಗುಲಿಕೇ ಕಲಹೀ ಬಹುಭಾರ್ಯಕ: ।**
**ಲೋಕದ್ವೇಷೀ ಕೃತಘ್ನಶ್ಚ ಸ್ವಲ್ಪಜ್ಞ: ಸ್ವಲ್ಪಕೋಪನ: ॥ ೩೯ ॥**

ಗುಳಿಕನು ಸಪ್ತಮದಲ್ಲಿದ್ದರೆ ಕಲಹವಂತನು, ಹೆಚ್ಚುಪತ್ನಿಯರು ಉಳ್ಳವನು, ಜನರನ್ನು ದ್ವೇಷಿಸುವವನು, ಕೃತಘ್ನನು, ತಿಳುವಳಿಕೆಉಳ್ಳವನು, ಅಲ್ಪಕೋಪಉಳ್ಳವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:**

**ಕಲಹಕೃದಿನ ಪೌತ್ರೇ ಕಾಮಯಾತೇ ಕುದಾರ: ।**
**ಸಕಲಜನ ವಿರೋಧಿ ಮಂದಬುದ್ಧಿ: ಕೃತಘ್ನ : ॥ ೪೦ ॥**

ಗುಳಿಕನು ಸಪ್ತಮದಲ್ಲಿದ್ದರೆ ಕಲಹವಂತನು, ದುಷ್ಟಸ್ವಭಾವದ ಪತ್ನಿಉಳ್ಳವನು, ಸಕಲ ಜನರೊಂದಿಗೆ ವೈರತ್ವಉಳ್ಳವನು, ಮಂದಬುದ್ಧಿಯವನು, ಕೃತಘ್ನನು ಆಗುತ್ತಾನೆ.

**ಪರಾಶರ ಮತ:-**

**ಸ್ತ್ರೀಜಿತ: ಪಾಪಕೃಜ್ಜಾರ: ಕೃಶಾಂಗೋ ಗತಸೌಹೃದ: ।**
**ಜೀವಿತ: ಸ್ತ್ರೀಧನೇನೈವ ಗುಲಿಕೇ ಸಪ್ತಮಸ್ಥಿತೇ ॥ ೪೧ ॥**

ಗುಳಿಕನು ಸಪ್ತಮದಲ್ಲಿದ್ದರೆ ಸ್ತ್ರೀವಶನಾದವನು, ಪಾಪಕರ್ಮನಿರತನು, ವ್ಯಭಿಚಾರಿಯು, ಕ್ಷೀಣದೇಹದವನು, ಮಿತ್ರರಿಲ್ಲದವನು, ಸ್ತ್ರೀಯರ ಧನದಿಂದ ಜೀವಿಸುವವನು ಆಗುತ್ತಾನೆ.

**ಪ್ರಶ್ನಮಾರ್ಗ ಮತ :- ವಿಷೇಕ್ಷಣೋ ವಂಶವಿದೂಷಣಶ್ಚ**
**ಕಳತ್ರಹಂತಾ ಮದಗೇತಿ ಕಾಮ: ॥ ೪೨ ॥**

ಗುಳಿಕನು ಸಪ್ತಮದಲ್ಲಿದ್ದರೆ ಜಾತಕನು ವಿಷದೃಷ್ಟಿಯುಳ್ಳವನು, ತನ್ನ ವಂಶವನ್ನು ದೂಷಿಸುವವನು, ಪತ್ನಿಯ ಹಂತಕನು, ಅತಿಕಾಮಿಯು ಆಗುತ್ತಾನೆ.

**''ಅಸ್ತೇ ಪಾಪಯುತೋ ಮಾಂದಿ ಉನ್ಮಾದದಾಯಿನೋ.,''**

ಪಾಪಗ್ರಹನಿಂದಯುತ ಸಪ್ತಮದ ಮಾಂದಿಯು ಉನ್ಮಾದರೋಗ ನೀಡುತ್ತಾನೆ. ಎಂದು ಪ್ರಶ್ನಮಾರ್ಗಕಾರನು ಹೇಳಿರುತ್ತಾನೆ.

**ಅನುಭವದಲ್ಲಿ ಕಂಡುಬಂದ ಫಲ:-**

ಸಪ್ತಮದ ಗುಳಿಕನಿಂದ ದಾಂಪತ್ಯಸುಖಕ್ಕೆ ತೊಡಕುಗಳು ಉಂಟಾಗುತ್ತವೆ ಪತ್ನಿಯು ಕ್ಷೀಣದೇಹದವಳು, ಚಂಚಲವಿಚಾರಗಳಿಂದ ಕೂಡಿದವಳು, ಅಥವಾ ಮಾನಸಿಕ ಭಯ ಅವಳಲ್ಲಿ ಇರುತ್ತದೆ. ಜಾತಕನಲ್ಲಿ ಕಲಹಸ್ವಭಾವ ಇರುವುದರಿಂದ ಹಾಗೂ ವೈರತ್ವದಿಂದ ಹಾನಿ ಸಂಭವಿಸುತ್ತದೆ. ಜಾತಕನಲ್ಲಿ ತೀವ್ರ ವಿಷಯಾಭಿಲಾಷೆ ಅಥವಾ ವ್ಯಭಿಚಾರ ಪ್ರವೃತ್ತಿ ಇರುತ್ತದೆ. ಪ್ರಯಾಣಗಳಿಂದ ಸಂಕಷ್ಟಗಳು, ಆಯಾಸ, ಹಾನಿ ಸಂಭವಿಸುತ್ತದೆ. ಇವರಲ್ಲಿ ಕರ್ಮಕುಶಲತೆ ಇದೆ, ಆದರೆ ಆಲಸ್ಯತನ, ವಿವಾದ ಪ್ರವೃತ್ತಿ ಹಾಗೂ ವಿಮರ್ಶೆಮಾಡದೆ ದುಡುಕುತನದ ವರ್ತನೆಯಿಂದ ನಷ್ಟ ಸಂಭವಿಸುತ್ತದೆ, ಪಾಲುವ್ಯಾಪಾರದಲ್ಲಿ ಪ್ರಗತಿ ಕಂಡುಬರುವುದಿಲ್ಲ.

ಗುಳಿಕನು ಪಾಪಗ್ರಹದಿಂದ ಯತ ಅಥವಾ ದೃಷ್ಟನಾಗಿ ಸಪ್ತಮದಲ್ಲಿದ್ದಾಗ ದಾಂಪತ್ಯವಿರಸ, ಪತ್ನಿಗೆ ಅನಾರೋಗ್ಯ, ವ್ಯಭಿಚಾರ ಪ್ರವೃತ್ತಿ, ಪ್ರಯಾಣದಲ್ಲಿ ಅವಘಡಗಳು, ವ್ಯಾಪಾರ ವ್ಯವಹಾರಗಳಲ್ಲಿ ಸೋಲು, ಅಪಮಾನ, ಇತ್ಯಾದಿ ಸಂಭವಿಸುತ್ತದೆ. ಗುಳಿಕನು ಕುಜನಯುತಿಯಲ್ಲಿ ಸಪ್ತಮದಲ್ಲಿದ್ದಾಗ ಪ್ರಣಯ ದುರಂತ, ದಾಂಪತ್ಯವಿರಸ, ವಿವಾಹ ವಿಚ್ಛೇದನ, ಸಹೋದರರೊಂದಿಗೆ ಪಾಲುವ್ಯಾಪಾರದಲ್ಲಿ ಹಾನಿ, ವಾಹನದಿಂದ ಅಪಘಾತ ಇತ್ಯಾದಿ ಸಂಭವಿಸುತ್ತದೆ. ಪತ್ನಿಯು ಉಷ್ಣವಿಕಾರ, ಪಿತ್ತಬಾಧೆಯಿಂದ ಪೀಡಿಸಲ್ಪಡುತ್ತಾಳೆ, ಅಥವಾ ಶಸ್ತ್ರಚಿಕಿತ್ಸೆ ಸಂಭವಿಸುತ್ತದೆ. ಗುಳಿಕನು ಶನಿಯ ಯುತಿಯಲ್ಲಿದ್ದಾಗ ವಿವಾಹದ

ನಂತರ ಆರ್ಥಿಕ ಸಂಕಷ್ಟಗಳು, ಪತ್ನಿಗೆ ಅನಾರೋಗ್ಯ, ಅಥವಾ ನರಗಳ ದುರ್ಬಲತೆ, ಕೈಕೆಳಗಿನವರಿಂದ ಹಾನಿ ಸಂಭವಿಸುತ್ತದೆ. ಗುಳಿಕನು ರಾಹುವಿನ ಯುತಿಯಲ್ಲಿದ್ದಾಗ ಪತ್ನಿಗೆ ಜ್ವರಬಾಧೆ, ವಿಷಭಯ, ರಕ್ತದೋಷ ಸಂಭವಿಸುತ್ತದೆ. ಇವರಲ್ಲಿ ವ್ಯಭಿಚಾರ ಪ್ರವೃತ್ತಿ ಇರುತ್ತದೆ, ಮತ್ತು ನೀಚ ಜನರ ಸಹವಾಸದಿಂದ ಆರ್ಥಿಕಹಾನಿ ಉಂಟಾಗುತ್ತದೆ. ಗುಳಿಕನು ಕೇತುವಿನ ಯುತಿಯಲ್ಲಿದ್ದಾಗ ಭಗ್ನಪ್ರಣಯ, ಸ್ತ್ರೀಯರಿಂದ ಅಪವಾದಗಳು ಮತ್ತು ಗೂಢವ್ಯಾಧಿ ಸಂಭವಿಸುತ್ತದೆ.

ಗುಳಿಕನು ಶುಭಗ್ರಹರಿಂದ ದೃಷ್ಟ ಅಥವಾ ಯುತನಾಗಿ ಸಪ್ತಮದಲ್ಲಿದ್ದಾಗ ವ್ಯಾಪಾರ-ವ್ಯವಹಾರಗಳಲ್ಲಿ ಯಶಸ್ಸು, ಕರ್ಮಕ್ಷೇತ್ರದಲ್ಲಿ ಉನ್ನತ ಅಧಿಕಾರ ಸಂಚಾರ ಉದ್ಯೋಗ, ಸ್ತ್ರೀಸುಖ ಇತ್ಯಾದಿ ಲಭಿಸುತ್ತದೆ. ಗುಳಿಕನು ಗುರುವಿನ ಯುತಿಯಲ್ಲಿದ್ದಾಗ ಸಂಘ ಸಂಸ್ಥೆಗಳ ಆಡಳಿತ. ಧಾರ್ಮಿಕ ಕಾರ್ಯಕಲಾಪಗಳಲ್ಲಿ ಆಸಕ್ತಿ ವಹಿಸುತ್ತಾರೆ. ಗುರುಹಿರಿಯರೊಡನೆ ಬೇಧಾಭಿಪ್ರಾಯ ಇರುತ್ತದೆ.

ಸಾಮಾನ್ಯವಾಗಿ ಸಪ್ತಮದ ಗುಳಿಕನು ದಾಂಪತ್ಯಕಲಹ, ಆಲಸ್ಯತನ, ಪ್ರಯಾಣಗಳಿಂದ ಹಾನಿ ಮತ್ತು ವಿಷಯಾಭಿಲಾಷೆಯನ್ನು ನೀಡುತ್ತಾನೆ:

**ಶುಕ್ರೇಮಾಂದಿ ಸಮಾಯುಕ್ತೇ ತಸ್ಮಾತ್ಕೇಂದ್ರ ತ್ರಿಕೋಣಗೇ ।**
**ರಾಹೌ ಚ ಮರಣಂ ಬ್ರೂಯಾದ್ಭಾರ್ಯಾಯಾ ಸ್ಪರ್ಪದಂಶನಾತ್ ॥**

ಶುಕ್ರನು ಮಾಂದಿಯ ಯುತಿಯಲ್ಲಿದ್ದು, ರಾಹುವು ಶುಕ್ರನ ಕೇಂದ್ರತ್ರಿಕೋಣದಲ್ಲಿ ಇದ್ದರೆ ಜಾತಕನ ಪತ್ನಿಗೆ ಹಾವುಕಚ್ಚಿ ಮರಣ ಸಂಭವಿಸುತ್ತದೆ.

## ೧೪. ಅಷ್ಟಮದಲ್ಲಿ ಮಾಂದಿ

**ಅಲ್ಪಾಯುರ್ಬಹುಬುದ್ಧಿಶ್ಚ ಬಹುರೋಗಶ್ಚ ಕಂಠಕಃ ।**
**ಗುಳಿಕೇ ನಿಧನಂ ಪ್ರಾಪ್ತೇ ವಿಷಶಸ್ತ್ರಾಗ್ನಿನಾಮೃತಿಃ ॥ ೪೩ ॥**

ಗುಳಿಕನು ಅಷ್ಟಮದಲ್ಲಿದ್ದರೆ ಅಲ್ಪಾಯುಷಿಯು, ಅತ್ಯಂತಬುದ್ಧಿವಂತನು ಅನೇಕ ವ್ಯಾಧಿ ಮತ್ತು ಕಂಟಕಗಳಿಂದ ಪೀಡಿತನು, ವಿಷ, ಶಸ್ತ್ರ, ಅಗ್ನಿ ಇತ್ಯಾದಿಗಳಿಂದ ಮರಣವನ್ನು ಹೊಂದುವವನು ಆಗುತ್ತಾನೆ.

**ವಿಕೃತನಯನ ವಕ್ತ್ರಃ ಸ್ವಲ್ಪಕಾಯೋರುಗಾರ್ಥೋ ।**
**ವ್ಯರಲದಹನ ಶಸ್ತ್ರೈಃ ದುರ್ಮೃತೋ ನಾಯತಾಯುಃ ॥ ೪೪ ॥**

ಗುಳಿಕನು ಅಷ್ಟಮದಲ್ಲಿದ್ದರೆ ವಿಕೃತವಾದ ಕಣ್ಣು ಮತ್ತು ಮುಖ ಉಳ್ಳವನು, ಮಧ್ಯಮನಿಲುವಿನವನು, ರೋಗಿಷ್ಟನು, ಅಲ್ಪಾಯುವು, ಆಯುಧ ಅಥವಾ ಬೆಂಕಿ ಅಥವಾ ನೀರಿನಿಂದ ಮರಣಹೊಂದುವವನು ಆಗುತ್ತಾನೆ.

**ಪರಾಶರ ಮತ:-**

**ಕ್ಷುಧಾಲುರ್ದುಃಖಿತಃ ಕ್ರೂರಸ್ತೀಕ್ಷ್ಣರೋಷೋತಿ ನಿರ್ಘೃಣಃ ।**
**ರಂಧ್ರಗೇ ಗುಲಿಕೇ ನಿಃಸ್ವೋ ಜಾಯತೇ ಗುಣವರ್ಜಿತಃ ॥ ೪೫ ॥**

ಅಷ್ಟಮದಲ್ಲಿ ಗುಳಿಕನಿದ್ದರೆ ಹಸಿವಿನಿಂದ ಬಳಲುವವನು, ದುಃಖಿತನು, ಕ್ರೂರಸ್ವಭಾವದವನು, ತೀಕ್ಷ್ಣಮತಿಯು, ಕೋಪಿಷ್ಟನು, ಅತಿನಿರ್ದಯಿಯು, ನಿರ್ಧನನು, ಗುಣವಿಹೀನನು ಆಗುತ್ತಾನೆ.

**ಪ್ರಶ್ನಮಾರ್ಗ ಮತ: - ಧೀಮಾನ್ ಬಹುವ್ಯಾಧಿರನಾಯತಾ-ಯುರ್ವಿಷಾಗ್ನಿ ಶಸ್ತ್ರೈ ಮೃತಿರಷ್ಟಮಸ್ಥೇ ।**

ಅಷ್ಟಮದಲ್ಲಿ ಗುಳಿಕನಿದ್ದರೆ ಜಾತಕನು ಬುದ್ಧಿವಂತನು, ಅನೇಕ ವ್ಯಾಧಿಗಳಿಂದ ಪೀಡಿಸಲ್ಪಟ್ಟವನು, ಅಲ್ಪಾಯುಷಿಯು, ವಿಷ, ಬೆಂಕಿ ಅಥವಾ ಶಸ್ತ್ರದಿಂದ ಮರಣವನ್ನು ಹೊಂದುತ್ತಾನೆ.

**ಅನುಭವದಲ್ಲಿ ಕಂಡುಬಂದ ಫಲ:-**

ಅಷ್ಟಮದಲ್ಲಿ ಮಾಂದಿ ಇದ್ದರೆ ಜಾತಕನಿಗೆ ಉತ್ತಮ ಆಹಾರ-ವಿಹಾರಗಳು ಲಭಿಸುವುದಿಲ್ಲ, ಅಥವಾ ಬಾಯಿರುಚಿ ಇರುವುದಿಲ್ಲ. ಶಾರೀರಿಕ ಆಯಾಸ, ಅಕಸ್ಮಾತ್ ಅನಾರೋಗ್ಯ, ಅಥವಾ ಸಂಕಷ್ಟಗಳು ಬಂದೊದಗುತ್ತವೆ. ಅಪಘಾತಭಯ, ಅಥವಾ ಮರಣಭೀತಿಯ ವಿಚಾರಗಳಿಂದ ಚಿಂತಿತರಾಗುತ್ತಾರೆ. ಚುರುಕು ಬುದ್ಧಿಯವರಾದರೂ ಶೀಘ್ರಕರ್ಮಿಗಳಾದ್ದರಿಂದ ಹಾನಿಗೀಡಾಗುತ್ತಾರೆ, ಹಾಗೂ ಆರ್ಥಿಕ ಅಡಚಣೆಯಿಂದ ಪೀಡಿಸಲ್ಪಡುತ್ತಾರೆ. ಗುಳಿಕನು ಲಗ್ನಾಧಿಪತಿಯ ಯುತಿಯಲ್ಲಿ ಅಷ್ಟಮದಲ್ಲಿ ಇದ್ದರೆ ಅಕಸ್ಮಾತ್ ಮರಣ ಸಂಭವಿಸುತ್ತದೆ.

ಗುಳಿಕನು ಪಾಪಗ್ರಹನಿಂದ ಯುತ ಅಥವಾ ದೃಷ್ಟನಾಗಿ ಅಷ್ಟಮದಲ್ಲಿದ್ದರೆ ಧನನಾಶ, ಹಿಂಸ್ರಸ್ವಭಾವ, ಕೋಪಾವೇಶ, ನಿರ್ದಯತೆ, ಶಾರೀರಿಕ ಪೀಡೆ, ಕುತ್ಸಿತಾನ್ನ, ಅಪಘಾತ, ಮೊದಲಾದವುಗಳಿಂದ ಪೀಡಿಸಲ್ಪಡುತ್ತಾರೆ. ಕುಜನಯುತಿಯಲ್ಲಿದ್ದಾಗ ಉಷ್ಣಪ್ರಕೋಪ, ಪಿತ್ತವ್ಯಾಧಿಗಳು, ವಾದ-ವಿವಾದ, ಕಲಹ, ವಾಹನ, ಯಂತ್ರಗಳಿಂದ ಅಪಘಾತ ಸಂಭವಿಸುತ್ತದೆ. ಶನಿಯಯುತಿಯಲ್ಲಿದ್ದಾಗ ನೀಚಜನರಿಂದ ಅವಮಾನ, ಕಳ್ಳತನದಿಂದ ಹಾನಿ, ವಾತಪ್ರಕೋಪ, ನರಗಳ ದುರ್ಬಲತೆ, ಸಂಚಾರ, ಪ್ರಯಾಣಗಳಲ್ಲಿ ಅಪಘಾತ ಸಂಭವಿಸುತ್ತದೆ. ರಾಹುವಿನ ಯುತಿಯಲ್ಲಿದ್ದಾಗ ವಿಷಬಾಧೆ, ರಕ್ತದೋಷ, ವಿಷಪ್ರಯೋಗ ಅಥವಾ ಅಕಾಲ ಮರಣ ಸಂಭವಿಸುತ್ತದೆ. ಕೇತುವಿನ ಯುತಿಯಲ್ಲಿದ್ದಾಗ ಕೃತ್ರಿಮಭೀತಿ, ದುಷ್ಟಶಕ್ತಿಗಳ ಪೀಡೆ, ನಿರ್ಣಯಿಸಲು ಅಸಾಧ್ಯವಾದ ವ್ಯಾಧಿಗಳು ಸಂಭವಿಸುತ್ತದೆ.

ಗುಳಿಕನು ಶುಭಗ್ರಹನಿಂದ ಯುತ ಅಥವಾ ದೃಷ್ಟನಾದಾಗ ಆಗ್ಗಾಗ್ಗೆ ಆರ್ಥಿಕ ಬದಲಾವಣೆಗಳು, ಅರಿಷ್ಟನಾಶ ಹಾಗೂ ಅಶುಭಫಲಗಳು ಆಗುತ್ತದೆ.

ಸಾಮಾನ್ಯವಾಗಿ ಅಷ್ಟಮದ ಗುಳಿಕನಿಂದ ಕುತ್ಸಿತಾನ್ನ, ಅಕಸ್ಮಾತ್ ಘಟನೆಗಳು, ಮತ್ತು ಸಂಕಷ್ಟಗಳು ಬಂದೊದಗುತ್ತವೆ.

| ಲಗ್ನ ೯ | ಬುಧ ೯<br>ರವಿ ೫<br>ಶನಿ ೬ | ಶುಕ್ರ ೧೨<br>ಕುಜ ೨ | |
|---|---|---|---|
| ರಾಹು ೧೧ | ಮಾದರಿ ಜಾತಕ-2<br>ಜನನ ತಾ. 29-4-1970 | ಮಾದರಿ ಜಾತಕ-2<br>ಜನನ ತಾ. 29-4-1970 | |
| ಚಂದ್ರ ೩ | ಶಿಷ್ಟ ಚಂದ್ರದಶಾ -<br>ವ. ೩ ಮಾ. ೧೧ ದಿ. ೧೨ | ಶಿಷ್ಟ ಚಂದ್ರದಶಾ -<br>ವ. ೩ ಮಾ. ೧೧ ದಿ. ೧೨ | ಕೇತು ೫ |
| | | ಮಾಂದಿ ೨<br>ವ. ಗುರು ೯ | |

ಮಾದರಿ ಜಾತಕ ಎರಡರ ಮೀನಲಗ್ನ ಶಿಶುವಿಗೆ ಲಗ್ನಾಧಿಪತಿ ಮತ್ತು ಗುಳಿಕನು ಅಷ್ಟಮಭಾವದಲ್ಲಿ ಇದ್ದಾರೆ ಹಾಗೂ ಷಷ್ಠಾಧಿಪತಿರವಿ ಮತ್ತು ವ್ಯಯಾಧಿಪತಿ ಶನಿಯಿಂದ ನೋಡಲ್ಪಡುತ್ತಾರೆ. ಚಂದ್ರದಶಾ ಬುಧಭುಕ್ತಿಯಲ್ಲಿ ತಾ. 29-12-70ರಂದು ಅತಿಸಾರದಿಂದ ಮಗುವಿನ ಮರಣ ಸಂಭವಿಸಿರುತ್ತದೆ.

**ಅವಸಾನಕಾಲ:**

**ಮಾಂದಿಸ್ಫುಟೇ ಭಾನುಸುತಂ ವಿಶೋಧ್ಯ ರಾಶ್ಯಂಸಕೋಣೇ ರವಿಜೇ ಮೃತಿಃ ಸ್ಯಾತ್ । ॥ ಜಾ. ಪಾ ॥**

ಮಾಂದಿಸ್ಫುಟದಿಂದ ಶನಿಸ್ಫುಟವನ್ನು ಕಳೆದು ಲಬ್ಧಸ್ಫುಟ ತುಲ್ಯರಾಶಿ ಅಥವಾ ನವಾಂಶರಾಶಿ ಅಥವಾ ಅವುಗಳ ತ್ರಿಕೋಣರಾಶಿಯಲ್ಲಿ ಶನಿಸಂಚಾರ ಕಾಲವು ಜಾತಕನ ಅವಸಾನಕಾಲ ಸೂಚಿಸುತ್ತದೆ.

**ವಿಲಗ್ನ ಮಾಂದಿಸ್ಫುಟಯೋಗಭಾಂಶಂ ನಿರ್ಯಾಣಮಾಸಂ ಪ್ರವದಂತಿ ತಜ್ಞಾಃ । ನಿರ್ಯಾಣಚಂದ್ರೋ ಗುಲಿಕೇಂದುಯೋಗೋ ಲಗ್ನಂ ವಿಲಗ್ನಾರ್ಕಿಸುತೇಂದು ಯೋಗಃ ॥ ೪೬ ॥ ಜಾ. ಪಾ ॥ ಫ. ದಿ. ॥**

**ನಿರ್ಯಾಣರವಿ:-** ಮಾಂದಿಸ್ಫುಟ ಮತ್ತು ಲಗ್ನಸ್ಫುಟವನ್ನು ಕೂಡಿಸಿ ತುಲ್ಯಸ್ಫುಟದಲ್ಲಿ ರವಿಚಾರ ನಿರ್ಯಾಣಮಾಸ ಸೂಚಿಸುತ್ತದೆ.

**ನಿರ್ಯಾಣಚಂದ್ರ:-** ಮಾಂದಿಸ್ಫುಟ ಮತ್ತು ಚಂದ್ರಸ್ಫುಟವನ್ನು ಕೂಡಿಸಿ ತುಲ್ಯಸ್ಫುಟದಲ್ಲಿ ಚಂದ್ರಚಾರ ನಿರ್ಯಾಣನಕ್ಷತ್ರ ಸೂಚಿಸುತ್ತದೆ.

**ನಿರ್ಯಾಣಲಗ್ನ:-** ಮಾಂದಿಸ್ಫುಟ, ಲಗ್ನಸ್ಫುಟ ಮತ್ತು ಚಂದ್ರಸ್ಫುಟವನ್ನು (ಇದನ್ನು ತ್ರಿಸ್ಫುಟ ಎನ್ನುತ್ತಾರೆ.) ಕೂಡಿಸಿ ತುಲ್ಯಸ್ಫುಟವು ನಿರ್ಯಾಣ ಲಗ್ನವನ್ನು ಸೂಚಿಸುತ್ತದೆ.

**ಮಾಂದಿಸ್ಫುಟೋದಿತ ನವಾಂಶಗತೇಽಮರೇಡ್ಯೇ ತದ್ ದ್ವಾದಶಾಂಶ ಸಹಿತೇ ದಿನನಾಥಸೂನೌ । ದ್ರೇಕ್ಕಾಣಕೋಣಭವನೇ ದಿನಪೇ ಚ ಮೃತ್ಯುರ್ಲಗ್ನೇಂದು ಮಾಂದಿ ಯುತಭೇಶಗತೋದಯೇ ಸ್ಯಾತ್ ॥**
**॥ ಜಾತಕ ಪಾರಿಜಾತ ॥ ॥ ೪೭ ॥**

**ನಿರ್ಯಾಣಗುರು:-** ಜನನಕಾಲದಲ್ಲಿ ಮಾಂದಿಸ್ಥಿತ ನವಾಂಶದಲ್ಲಿ ಗುರುಚಾರ ನಿರ್ಯಾಣಕಾಲ ಸೂಚಕ ಆಗಿರುತ್ತದೆ.

**ನಿರ್ಯಾಣಶನಿ:-** ಮಾಂದಿಸ್ಥಿತ ದ್ವಾದಶಾಂಶದಲ್ಲಿ ಶನಿಚಾರ ನಿರ್ಯಾಣಕಾಲ ಸೂಚಕ ಆಗಿರುತ್ತದೆ.

**ನಿರ್ಯಾಣರವಿ:-** ಮಾಂದಿಸ್ಥಿತ ದ್ರೇಕ್ಕಾಣ ಅಥವಾ ಅದರ ತ್ರಿಕೋಣ ದ್ರೇಕ್ಕಾಣದಲ್ಲಿ ರವಿಚಾರ ನಿರ್ಯಾಣಮಾಸ ಸೂಚಿಸುತ್ತದೆ.

**ನಿರ್ಯಾಣಲಗ್ನ:-** ಲಗ್ನ, ಚಂದ್ರ ಮತ್ತು ಮಾಂದಿಸ್ಫುಟವನ್ನು ಕೂಡಿಸಿ ತುಲ್ಯರಾಶ್ಯಾಧಿಪನು ಸ್ಥಿತರಾಶಿಯು ನಿರ್ಯಾಣಲಗ್ನ ಆಗುತ್ತದೆ.

**ಯೋ ರಾಶಿರ್ಗುಲಿಕೋಪೇತಃತತ್ ತ್ರಿಕೋಣಗತೇ ಶನೌ ।ಮರಣಂ ನಿಶಿಜಾತಾನಾಂ ದಿನಜಾನಾಂ ತದಸ್ತಗೇ ॥ ೪೮ ॥ ಫ. ದೀ ॥**

ಗುಳಿಕನ ತ್ರಿಕೋಣರಾಶಿಯಲ್ಲಿ ಶನಿಯು ಗೋಚರಿಸುವಾಗ ರಾತ್ರೆ ಕಾಲದಲ್ಲಿ ಜನಿಸಿದವರ ಮರಣಕಾಲವನ್ನು ಸೂಚಿಸುತ್ತಾನೆ.

ಗುಳಿಕಸ್ಥಿತ ರಾಶಿಯಿಂದ ಸಪ್ತಮದ ತ್ರಿಕೋಣದಲ್ಲಿ, (ಮಾಂದಿಸ್ಥಿತ ರಾಶಿಯಿಂದ ತೃತೀಯ ಮತ್ತು ಲಾಭ), ಶನಿಯು ಗೋಚರಿಸುವಾಗ ಹಗಲಿನಲ್ಲಿ ಜನಿಸಿದವರ ಮರಣಕಾಲವನ್ನು ಸೂಚಿಸುತ್ತಾನೆ.

| | | | |
|---|---|---|---|
| | | ಕೇತು ೧೨ | |
| | ಮಾದರಿ ಜಾತಕ-3<br>ಜನನ ತಾ. 6-1-1901<br>ಶೇಷ, ಶನಿದಶಾ -<br>ವ.೨ ಮಾ.೨ ದಿ.೨೪ | | ಚಂದ್ರ ೮ |
| | | | ಕುಜ ೬<br>ಮಾಂದಿ ೭ |
| ರವಿ ೭<br>ಬುಧ ೫<br>ಗು. ೨ ಶ.೫ | ಶುಕ್ರ ೧೧<br>ರಾಹು ೬ | | ಲಗ್ನ ೬ |

ಮಾದರಿಜಾತಕ ಮೂರರ ಕನ್ಯಾಲಗ್ನ ಜಾತಕನ ಮಾಂದಿಸ್ಫುಟವು ಸಿಂಹ ರಾಶಿಯಲ್ಲಿ 22° 43' ಆಗಿರುತ್ತದೆ. 4-2-71ರಂದು ರಾಹುದಶಾ ರಾಹುಭುಕ್ತಿಯಲ್ಲಿ ಹೃದಯಸ್ತಂಭನದಿಂದ ಜಾತಕನ ನಿಧನ ಆಗಿರುತ್ತದೆ. ಮರಣ ಕಾಲದಲ್ಲಿ ಶನಿಯು ಮಾಂದಿ ತ್ರಿಕೋಣವಾದ ಮೇಷರಾಶಿಯಲ್ಲಿ 22° 43' ಚಲಿಸಿರುತ್ತಾನೆ.

| | | ಚಂದ್ರ ೫ | ಗುರು ೧೨ |
|---|---|---|---|
| ಶನಿ ೧೨<br>ಮಾಂದಿ ೭ | ಮಾದರಿ ಜಾತಕ - 4 | | ರಾಹು ೮ |
| ಕೇತು ೨ | ಜನನ ತಾ. 8-10-1906 | | ಕುಜ ೬ |
| ಲಗ್ನ ೭ | ಶುಕ್ರ ೫ | ಬುಧ ೭ | ರವಿ ೪ |

ಮಾದರಿಜಾತಕ ನಾಲ್ಕರ ಧನುರ್ಲಗ್ನಸ್ತ್ರೀಯ ಜನನವು ಹಗಲಿನದ್ದಾಗಿರುತ್ತದೆ. ಮಾಂದಿಸ್ಥಿತ ರಾಶಿಯಿಂದ ಸಪ್ತಮವು ಸಿಂಹರಾಶಿ ಮತ್ತು ಆದರ ತ್ರಿಕೋಣಗಳಾದ ಧನು ಮತ್ತು ಮೇಷ ರಾಶಿಗಳಲ್ಲಿ ಶನಿಸಂಚಾರ ಕಾಲವು ಮರಣಸೂಚಕ ಆಗಿರುತ್ತದೆ. ಜಾತಕಳು ತಾ. 29-8-30ರಂದು ಬಾವಿಗೆ ಬಿದ್ದು ಮರಣಹೊಂದಿರುತ್ತಾಳೆ. ಮರಣಕಾಲದಲ್ಲಿ ಶನಿಯು ಧನುರಾಶಿಯಲ್ಲಿ 12° 30' ಚಲಿಸಿರುತ್ತಾನೆ.

**ಲಗ್ನೇಂದು ಮಾಂದಿ ಸಂಯೋಗ ತ್ರಿಸ್ಫುಟಂತಚ್ಚ ಭಾನುಯುಕ್ ।
ಚತುಸ್ಫುಟಂ ರಾಹುಯುಕ್ತಮೇತತ್ಪಂಚ ಸ್ಫುಟಂ ಭವೇತ್
॥ ೪೯ ॥ ॥ ಪ್ರಶ್ನಮಾರ್ಗ ॥**

**ತ್ರಿಸ್ಫುಟ** - ಲಗ್ನಸ್ಫುಟ, ಚಂದ್ರಸ್ಫುಟ ಮತ್ತು ಮಾಂದಿಸ್ಫುಟ, ಈ ಮೂರನ್ನು ಕೂಡಿಸಿ ಬಂದ ಸ್ಫುಟವು ತ್ರಿಸ್ಫುಟ ಆಗುತ್ತದೆ.

**ಚತುಸ್ಫುಟ:-** ತ್ರಿಸ್ಫುಟಕ್ಕೆ ರವಿಸ್ಫುಟ ಕೂಡಿಸಿ ಬಂದ ಸ್ಫುಟವು ಚತುಸ್ಫುಟ
**ಪಂಚಸ್ಫುಟ:-** ಚತುಸ್ಫುಟಕ್ಕೆ ರಾಹುಸ್ಫುಟ ಕೂಡಿಸಿ ಬಂದ ಸ್ಫುಟವು ಪಂಚಸ್ಫುಟ ಆಗುತ್ತದೆ.

**ಲಗ್ನಂ ಪಂಚಹತಂ ಚ ಮಾಂದಿಸಹಿತಂ ಪ್ರಾಣಸ್ಫುಟಂ ಪ್ರಾಣಿನಾಂ ಚಂದ್ರಸ್ಯ ಸ್ಫುಟಮಷ್ಟಕೇನ ಗುಣಿತಂ ದೇಹಂ ಸಮಾಂದಿಸ್ಫುಟಮ್ । ಸಪ್ತಘ್ನಂ ಗುಲಿಕಸ್ಫುಟಂ ಸಹ ದಿವಾನಾಥೇನ ಮೃತ್ಯುರ್ಭವೇತ್ ತಸ್ಮಾಜ್ಜೀವಕಲೇಬರೈಕ್ಯವಿಪುಲೇ ಜಾತಶ್ಚಿರಂ ಜೀವತಿ ॥ ೫೦ ॥**

**ಪ್ರಾಣಸ್ಫುಟ:-** ಲಗ್ನಸ್ಫುಟವನ್ನು ಐದರಿಂದ ಗುಣಿಸಿ ಬಂದ ಲಬ್ಧಕ್ಕೆ ಮಾಂದಿಸ್ಫುಟವನ್ನು ಕೂಡಿಸಿ, ಪಡೆದ ಮೊತ್ತವು ಪ್ರಾಣಸ್ಫುಟ ಆಗುತ್ತದೆ.

**ದೇಹಸ್ಫುಟ:-** ಚಂದ್ರಸ್ಫುಟವನ್ನು ಎಂಟರಿಂದ ಗುಣಿಸಿ ಬಂದ ಲಬ್ಧಕ್ಕೆ ಮಾಂದಿಸ್ಫುಟವನ್ನು ಕೂಡಿಸಿ ಪಡೆದ ಮೊತ್ತವು ದೇಹಸ್ಫುಟ ಆಗುತ್ತದೆ.

**ಮೃತ್ಯುಸ್ಫುಟ:-** ಮಾಂದಿಸ್ಫುಟವನ್ನು ಏಳರಿಂದ ಗುಣಿಸಿ ಬಂದ ಲಬ್ಧಕ್ಕೆ, ಸೂರ್ಯಸ್ಫುಟವನ್ನು ಕೂಡಿಸಿ ಪಡೆದ ಮೊತ್ತವು ಮೃತ್ಯುಸ್ಫುಟ ಆಗುತ್ತದೆ. ಪ್ರಾಣ (ಜೀವ) ಮತ್ತು ದೇಹಸ್ಫುಟದ ಮೊತ್ತವು ಮೃತ್ಯುಸ್ಫುಟಕ್ಕಿಂತ ಅಧಿಕವಾದರೆ ಜಾತಕನು ದೀರ್ಘಾಯುವು ಆಗುತ್ತಾನೆ.

**ಭಾನುಭಾನುಜಮಾಂದಿನಾಂ ಸ್ಫುಟಯೋಗಂ ಗತೇ ರವೌ ।
ಲಗ್ನಮಾಂದಿಸ್ಫುಟೈಕ್ಯೋತ್ಥಭಾಂಶಗೇ ವಾ ರವೌ ಮೃತಿಃ ॥
ಮಾಂದಿಂದುಲಗ್ನಸಂಯೋಗ ರಾಶೌ ಮರಣಮಾದಿಶೇತ್ ।
ಅತ್ರೋದಿತೇಷು ಸರ್ವತ್ರ ತ್ರಿಕೋಣಮಪಿ ಚಿಂತಯೇತ್ ॥ ೫೧ ॥**

**ನಿರ್ಯಾಣರವಿ:-** 1. ರವಿ, ಶನಿ ಮತ್ತು ಮಾಂದಿಸ್ಫುಟವನ್ನು ಕೂಡಿಸಿ ತುಲ್ಯಸ್ಫುಟದಲ್ಲಿ ರವಿಚಾರ ನಿರ್ಯಾಣಮಾಸ ಸೂಚಿಸುತ್ತದೆ. 2. ಲಗ್ನ ಮತ್ತು ಮಾಂದಿಸ್ಫುಟವನ್ನು ಕೂಡಿಸಿ ತುಲ್ಯ ನವಾಂಶದಲ್ಲಿ ರವಿಚಾರ ನಿರ್ಯಾಣಮಾಸ ಆಗಿರುತ್ತದೆ. ನಿರ್ಯಾಣಚಂದ್ರ - ಮಾಂದಿ, ಚಂದ್ರ ಮತ್ತು ಲಗ್ನಸ್ಫುಟವನ್ನು ಕೂಡಿಸಿ ತುಲ್ಯರಾಶಿಯಲ್ಲಿ ಚಂದ್ರಚಾರ ನಿರ್ಯಾಣ ಮಾಸ ಆಗಿರುತ್ತದೆ. ಈ ನಿರ್ಯಾಣಕಾಲವನ್ನು ಶೋಧಿತ ಗ್ರಹನರಾಶಿಯ ತ್ರಿಕೋಣರಾಶಿಯಿಂದಲೂ ಚಿಂತಿಸಬೇಕು.

**ವಿಲಗ್ನಜನ್ಮಾಷ್ಟಮರಾಶಿನಾಥಯೋಃ ಖರತ್ರಿಭಾಗೇಶ್ವರಯೋಸ್ತ ಯೋರಪಿ ಶಶಾಙ್ಕಮಾಂದ್ಯೋರಪಿ ದುರ್ಬಲಾಂಶಕತ್ರಿಕೋಣಗೇ**

**ಸೂರ್ಯಸುತೇ ಮೃತಿರ್ಭವೇತ್ ॥ ೫೨ ॥ ॥ ಫಲದೀಪಿಕಾ ॥**

**ನಿರ್ಯಾಣಶನಿ:-** 1. ಲಗ್ನಾಧಿಪತಿ ಮತ್ತು ಅಷ್ಟಮಾಧಿಪತಿ, 2. ಲಗ್ನದಿಂದ ಮತ್ತು ಚಂದ್ರನಿಂದ ೨೨ನೇ ದ್ರೇಕ್ಕಾಣಾಧಿಪತಿ, ಮತ್ತು 3. ಚಂದ್ರ ಮತ್ತು ಮಾಂದಿ ಈ ಮೂರು ವಿಭಾಗದಲ್ಲಿ ನಿರ್ಬಲನಾದವರ ನವಾಂಶರಾಶಿಯ ತ್ರಿಕೋಣದಲ್ಲಿ ಶನಿಸಂಚಾರಕಾಲ ಮರಣ ಸಂಭವಿಸಬಹುದು.

**ರಂಧ್ರೇಶೋ ಗುಲಿಕೋ ಮಂದ ಖರದ್ರೇಕ್ಕಾಣಪೋಽಪಿ ವಾ ।**
**ಯತ್ರತಿಷ್ಠತಿ ತದ್ಭಾಂಶತ್ರಿಕೋಣೇ ರವಿಜೇ ಮೃತಿ: ॥ ೫೩ ॥ ಫ. ದೀ. ॥**

ಅಷ್ಟಮಾಧಿಪತಿ, ಗುಳಿಕ, ಶನಿ ಮತ್ತು ಖರದ್ರೇಕ್ಕಾಣಾಧಿಪತಿ ಇವರು 1. ನಿಂತರಾಶಿ, 2. ಸ್ಥಿತನವಾಂಶರಾಶಿ, 3. ಈ ರಾಶಿ ಮತ್ತು ಅಂಶರಾಶಿಯ ತ್ರಿಕೋಣರಾಶಿ, ಇವುಗಳಲ್ಲಿ ಶನಿಸಂಚಾರಕಾಲದಲ್ಲಿ ಮರಣ ಸಂಭವಿಸಬಹುದು.

**ಮಾಂದ್ಯಾರೂಢನವಾಂಶ ಕಾಮಗೃಹಗಾ: ಸೌಮ್ಯಾ: ಸುಮೃತ್ಯುಪ್ರದಾ: ಪಾಪಾಸ್ತತ್ರಗತಾಸ್ತು ದುರ್ಮತಿಕರಾಸ್ತೇಷ್ವರ್ಕ ಉರ್ವೀಪತೇ: । ಕ್ಷೀಣೇಂದು ಸಲಿಲೇ ಯುಧಿಕ್ಷಿತಿಸುತ: ಸೂರ್ಯಾತ್ಮಜೋ ವಂಚನಾದ್ರಾಹು: ಪನ್ನಗದಂಶನಾನ್ಮರಣದೋ ಯದ್ವಾ ವಿಷ ಸ್ಪರ್ಶನಾತ್ ॥ ೫೪ ॥**

1. ಮಾಂದಿಸ್ಥಿತ ನವಾಂಶರಾಶಿಯ ಸಪ್ತಮದಲ್ಲಿ ಶುಭಗ್ರಹರಿದ್ದರೆ ಜಾತಕನಿಗೆ ಅಥವಾ ಪ್ರಶ್ನಕನಿಗೆ ಸುಖಪ್ರದ ಮರಣ. 2. ಈ ಸಪ್ತಮರಾಶಿಯಲ್ಲಿ ಪಾಪಗ್ರಹರಿದ್ದರೆ ದುರ್ಮರಣ. 3. ಸಪ್ತಮಸ್ಥಿತ ಈ ಗ್ರಹನು ರವಿಯಾದರೆ ರಾಜರಿಂದ (ರಾಜಕೀಯದಿಂದ), 4. ಕ್ಷೀಣಚಂದ್ರನಾದರೆ ನೀರಿನಲ್ಲಿ ಮುಳುಗಿ, 5. ಕುಜನಾದರೆ ಯುದ್ಧದಲ್ಲಿ, 6. ಶನಿಯಾದರೆ ವಂಚನೆಯಿಂದ, 7. ರಾಹು ಆದರೆ ಸರ್ಪಕಚ್ಚಿ ಅಥವಾ ವಿಷಸ್ಪರ್ಶನದಿಂದ ದುರ್ಮರಣ.

## ೧೫. ನವಮದಲ್ಲಿ ಮಾಂದಿ

**ಆಚಾರಗುರುಹೀನಶ್ಚ ಧರ್ಮಘ್ನೋ ಮಂತ್ರಹೀನಕ: । ಅವಿವೇಕಿ ಮಹಾಕ್ರೋಧಿ ಮಾಂದೌನವಮ ಸಂಸ್ಥಿತೇ ॥ ॥ ೫೫ ॥**

ಗುಳಿಕನು ನವಮದಲ್ಲಿದ್ದರೆ ಆಚಾರವಿಲ್ಲದವನು, ಗುರುಹಿರಿಯರಿಲ್ಲದವನು, ಧಾರ್ಮಿಕ ಮಾರ್ಗವನ್ನು ತ್ಯಜಿಸಿದವನು, ಮಂತ್ರ ಜಪಾದಿ ಮಾಡದವನು, ಅವಿವೇಕಿಯು, ಮಹಾಕೋಪಿಷ್ಠನು ಆಗುತ್ತಾನೆ.

**ಫಲದೀಪಿಕಾ ಮತ:-**

**ಗುರುಸುತವಿಯುತೋ ಭೂರ್ದ್ಧ ರ್ಮಸಂಸ್ಥೇರ್ಕಪೌತ್ರೇ ।**

ಗುಳಿಕನು ನವಮದಲ್ಲಿದ್ದರೆ ಜಾತಕನು ಗುರುಹಿರಿಯರನ್ನು, ಮಕ್ಕಳನ್ನು ಕಳಕೊಂಡವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:-**

**ಗುರುಜನ ಪಿತೃಹಂತಾ ನೀಚಕೃತ್ಯೋ ಗುರುಸ್ಥೋ ।**

ಗುಳಿಕನು ನವಮದಲ್ಲಿದ್ದರೆ ಅನೇಕ ನೀಚಕೃತ್ಯಗಳನ್ನು ಮಾಡುತ್ತಾನೆ. ಗುರು-ಹಿರಿಯರ ನಾಶ ಅಥವಾ ನಿಂದೆ ಮಾಡುತ್ತಾನೆ.

**ಪರಾಶರ ಮತ:-**

**ಬಹುಕ್ಲೇಶ: ಕೃಶತನುರ್ದುಷ್ಕರ್ಮಾತಿ ನಿಘೃಣ: । ಗುಲಿಕೇ ಧರ್ಮಗೇ ಮಂದ: ಪಿಶುನೋ ಬಹಿರಾಕೃತಿ ॥೫೫॥**

ಗುಳಿಕನು ನವಮದಲ್ಲಿದ್ದರೆ ಅತ್ಯಂತ ಕ್ಲೇಶವನ್ನು ನೀಡುತ್ತಾನೆ. ಕೃಶವಾದ ಶರೀರ, ದುಷ್ಕರ್ಮಗಳನ್ನು ಮಾಡುವವನು, ದಯಾರಹಿತನು, ವಂಚಕನು ಆಗುತ್ತಾನೆ.

**ಪ್ರಶ್ನಮಾರ್ಗಮತ:- ಧರ್ಮಸ್ಥಿತೇ ಧರ್ಮ ತಪೋ ಮನೂನ:**

ಗುಳಿಕನು ನವಮದಲ್ಲಿದ್ದರೆ ಧಾರ್ಮಿಕ ಕಾರ್ಯಗಳಲ್ಲಿ ಅಡಚಣೆ, ನ್ಯೂನ್ಯತೆ ಉಂಟಾಗುತ್ತದೆ, ಅಥವಾ ಧಾರ್ಮಿಕಪ್ರವೃತ್ತಿ ಇರುವುದಿಲ್ಲ.

**ಅನುಭವದಲ್ಲಿ ಕಂಡುಬಂದ ಫಲ:-**

ಗುಳಿಕನು ನವಮದಲ್ಲಿದ್ದರೆ ಧಾರ್ಮಿಕ ಕಾರ್ಯಕಲಾಪಗಳಲ್ಲಿ ವಿಘ್ನಗಳು ಉಂಟಾಗುತ್ತವೆ, ಧಾರ್ಮಿಕ ಪ್ರವೃತ್ತಿ ಇರುವುದಿಲ್ಲ. ಗುರು-ಹಿರಿಯರೊಂದಿಗೆ ಬೇಧಾಭಿಪ್ರಾಯ ಅಥವಾ ಕಲಹ ಸಂಭವಿಸುತ್ತದೆ. ಪರಿಶ್ರಮ ಮತ್ತು ಪ್ರಯತ್ನದಿಂದ ಭಾಗ್ಯೋದಯ ಆಗುತ್ತದೆ. ಇವರಲ್ಲಿ ವಂಚನೆಯಿಂದ ಧನಗಳಿಸುವ ಪ್ರವೃತ್ತಿ ಇರುತ್ತದೆ.

ಗುಳಿಕನು ಪಾಪಗ್ರಹಯುತಿ ಅಥವಾ ದೃಷ್ಟಿಯಲ್ಲಿದ್ದರೆ ನಾಸ್ತಿಕವಾದ ಗುರು-ಹಿರಿಯರೊಡನೆ ವಾದ-ವಿವಾದ, ಕಲಹಗಳು, ಭಾಗ್ಯೋದಯಕ್ಕೆ ವಿಘ್ನಗಳು. ಸಂತಾನಚಿಂತೆ, ದುಷ್ಕರ್ಮ ಪ್ರವೃತ್ತಿ ಇತ್ಯಾದಿ ಕಂಡುಬರುತ್ತವೆ.

ಗುಳಿಕನು ಕುಜನಯುತಿಯಲ್ಲಿ ಇದ್ದಾಗ ಸಹೋದರರಿಂದ ಭಾಗ್ಯಕ್ಕೆ ಹಾನಿ, ಅಥವಾ ಸಹೋದರರನ ನಷ್ಟಸಂಭವಿಸುತ್ತದೆ. ಶನಿಯಯುತಿಯು ನಾಸ್ತಿಕತೆ, ಧಾರ್ಮಿಕ ಕಾರ್ಯಗಳಲ್ಲಿ ವಿಘ್ನಗಳು, ತೊಡಸೋವು ನೀಡುತ್ತದೆ. ರಾಹು ವಿನಯುತಿಯಲ್ಲಿ ಸಂತಾನಚಿಂತೆ, ತಂದೆಯೊಂದಿಗೆ ಕಲಹ, ಅಥವಾ ಅಗಲುವಿಕೆ, ಆಗುತ್ತದೆ. ಹಿರಿಯರಿಗೆ ಗುಣಪಡಿಸಲು ಕಷ್ಟಸಾಧ್ಯವ್ಯಾಧಿ ತಗಲುತ್ತದೆ. ಕೇತುವಿನಯುತಿಯಲ್ಲಿ ಧಾರ್ಮಿಕ ಪ್ರವೃತ್ತಿ ಇದ್ದರೂ ವಿಘ್ನಗಳಿಂದ ಧಾರ್ಮಿಕ ಕಾರ್ಯಗಳನ್ನು ಮಾಡಲು ಅಸಮರ್ಥರಾಗುತ್ತಾರೆ. ತಂದೆಯ ಆರೋಗ್ಯ ಉತ್ತಮ ಇರುವುದಿಲ್ಲ.

ಗುಳಿಕನು ಶುಭಗ್ರಹದ ಯುತಿ ಅಥವಾ ದೃಷ್ಟಿಯಲ್ಲಿ ನವಮದಲ್ಲಿದ್ದರೆ ದೀರ್ಘಕಾಲದ ನಂತರ ಭಾಗ್ಯೋದಯ ಆಗುತ್ತದೆ. ಹಲವಾರು ಅಡಚಣೆಗಳಿಂದ ಧಾರ್ಮಿಕ ಕಾರ್ಯಗಳನ್ನು ನೆರವೇರಿಸುತ್ತಾರೆ. ಧಾರ್ಮಿಕ ಅಥವಾ ಗೂಢ ವಿಷಯಯಗಳ ಅಧ್ಯಯನದಲ್ಲಿ ಆಸಕ್ತಿ ಇರುತ್ತದೆ. ಪರಿಶ್ರಮದಿಂದ ಪ್ರಗತಿಹೊಂದಿ ಸ್ಥಾನ-ಮಾನ ಗಳಿಸುತ್ತಾರೆ.

ಸಾಮಾನ್ಯವಾಗಿ ನವಮದ ಗುಳಿಕನು ಧಾರ್ಮಿಕಕಾರ್ಯ ಅಥವಾ ಶುಭ ಸಮಾರಂಭಗಳಲ್ಲಿ ವಿಘ್ನಗಳನ್ನು, ಭಾಗ್ಯಚಿಂತೆ ಮತ್ತು ಗುರುಹಿರಿಯರೊಡನೆ ಬೇಧಾಭಿಪ್ರಾಯ ನೀಡುತ್ತಾನೆ.

## ೧೬. ದಶಮದಲ್ಲಿ ಮಾಂದಿ

**ಅನ್ಯಕಾರ್ಯರತಃ । ಕಾಮೀ ಪೌರುಷಃ ಕೀರ್ತಿವಿಶ್ರುತಃ ।**
**ಅರ್ಥಾನರ್ಥಕರಶ್ಚೈವ ಮಾಂದೌ ದಶಮ ಸಂಸ್ಥಿತೇ ॥ ೫೬ ॥**

ಗುಳಿಕನು ದಶಮದಲ್ಲಿ ಇದ್ದರೆ ಜಾತಕನು ಪರಕಾರ್ಯಗಳಲ್ಲಿ ನಿರತನಾದವನು, ಕಾಮಿಯು, ಪೌರುಷವಂತನು, ಪ್ರಖ್ಯಾತನು, ಅನರ್ಥಗಳಿಂದ ಪೀಡಿಸಲ್ಪಟ್ಟವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:-**

**ಅಶುಭಶತಸಮೇತಃ ಕರ್ಮಗೇ ಮಂದಸೂನೌ । ನಿಜಕುಲಹಿತ ಕರ್ಮಾಚಾರಹೀನೋ ವಿಮಾನಃ ॥ ೫೭ ॥**

ಗುಳಿಕನು ದಶಮದಲ್ಲಿ ಇದ್ದರೆ ನೂರಾರು ಅಶುಭ ಕೆಲಸಗಳನ್ನು ಮಾಡುವವನು, ತನ್ನ ಕುಲಕ್ಕೆ ಸರಿಯಾದ ಆಚರಣೆ ಇಲ್ಲದವನು, ಮಾನವನ್ನು ಕಳಕೊಂಡವನು ಆಗುತ್ತಾನೆ.

**ಫಲದೀಪಿಕಾ ಮತ:-**

**ನ ಶುಭಫಲದಕರ್ಮಾ ಕರ್ಮಸಂಸ್ಥೇ ವಿದಾನ: ।**

ಗುಳಿಕನು ದಶಮದಲ್ಲಿದ್ದರೆ ಶುಭಕರ್ಮಗಳನ್ನು ಮಾಡದವನು, ಮತ್ತು ದಾನಗಳನ್ನು ನೀಡದವನು ಆಗುತ್ತಾನೆ.

**ಪರಾಶರ ಮತ:-**

**ಪುತ್ರಾನ್ವಿತ: ಸುಖೀ ಭೋಕ್ತಾ ದೇವಾಗ್ನ್ಯರ್ಚನ ವತ್ಸಲ ।**
**ದಶಮೇ ಗುಲಿಕೇ ಜಾತೋ ಯೋಗದರ್ಮಾಶ್ರಿತ: ಸುಖೀ ॥ ೫೮ ॥**

ಗುಳಿಕನು ದಶಮದಲ್ಲಿ ಇದ್ದರೆ ಪುತ್ರರಿಂದಕೂಡಿದವನು, ಸುಖವಂತನು, ಭೋಗವಂತನು, ದೇವತಾರಾಧನೆ, ಹೋಮಾದಿಗಳಲ್ಲಿ ಆಸಕ್ತಿ ಉಳ್ಳವನು, ಯೋಗಾಭ್ಯಾಸ, ಧಾರ್ಮಿಕ ಆಚರಣೆ, ಇತ್ಯಾದಿಗಳನ್ನು ನಿರ್ವಹಿಸುವವನು, ಸುಖವಂತನು ಆಗುತ್ತಾನೆ.

**ಪ್ರಶ್ನಮಾರ್ಗ ಮತ:- ಖಸ್ಥೇ ಸುಕೀರ್ತಿ: ಪರಕಾರ್ಯಸಕ್ತ: ॥**

ಗುಳಿಕನು ದಶಮದಲ್ಲಿ ಇದ್ದರೆ ಉತ್ತಮವಾದ ಯಶಸ್ಸು ಉಳ್ಳವನು, ಕೀರ್ತಿವಂತನು, ಪರೋಪಕಾರ, ಪರಕಾರ್ಯಗಳನ್ನು ಮಾಡುವವನು ಆಗುತ್ತಾನೆ.

**ಅನುಭವದಲ್ಲಿ ಕಂಡುಬಂದ ಫಲ:-**

ದಶಮಭಾವದಲ್ಲಿ ಗುಳಿಕನಿದ್ದರೆ ಜಾತಕನಲ್ಲಿ ಕೈಕೊಂಡ ಕಾರ್ಯಗಳನ್ನು ಪೂರೈಸುವ ಛಲಸ್ವಭಾವ ಇರುತ್ತದೆ. ಆದರೆ ಕರ್ಮಕ್ಕೆತಕ್ಕ ಪ್ರತಿಫಲ ಲಭಿಸುವುದಿಲ್ಲ. ದೇವತಾರಾಧನೆ, ಧರ್ಮಿಕ ಕಾರ್ಯ-ಕಲಾಪಗಳನ್ನು ಉತ್ಸುಕತೆಯಿಂದ ಪ್ರಾರಂಭಿಸುತ್ತಾರೆ. ಆದರೆ ಹಲವಾರು ವಿಘ್ನಗಳಿಂದ ಪೂರ್ತಿಗೊಳಿಸಲು ಅಸಮರ್ಥರು ಆಗುತ್ತಾರೆ. ಕರ್ಮಕ್ಷೇತ್ರದಲ್ಲಿದಕ್ಷತೆಯಿಂದ ಆಡಳಿತ ನಿರ್ವಹಿಸುತ್ತಾರೆ. ಆದರೆ ಹಲವಾರು ಶತ್ರುಗಳು ಉಂಟಾಗುತ್ತಾರೆ. ಇವರು ಉತ್ಪಾದನಾಸಂಸ್ಥೆ ಅಥವಾ ನೂತನ ಉದ್ಯಮ ಕಾರ್ಯಗತಗೊಳಿಸಲು

ಪ್ರಯತ್ನಿಸಿ ವಿಫಲರಾಗುತ್ತಾರೆ. ದೀರ್ಘಕಾಲದ ನಂತರ ಸತತ ಪ್ರಯತ್ನ ಮತ್ತು ಹಠಸಾಧನೆಯಿಂದ ಇವರ ಇಷ್ಟಾರ್ಥ ಕೈಗೂಡುತ್ತದೆ. ರಾಜಕೀಯದಲ್ಲಿ ಇವರು ಪ್ರಭಾವಶಾಲಿ ವ್ಯಕ್ತಿಗಳಾಗಿ ಇತರರಿಗೆ ಹಲವಾರು ಸಮಸ್ಯೆಗಳನ್ನು ತಂದೊಡ್ಡುತ್ತಾರೆ. ಆದರೆ ಉನ್ನತ ಅಧಿಕಾರಗಳಿಸಲು ಅಸಮರ್ಥರು ಆಗುತ್ತಾರೆ.

ಪಾಪಗ್ರಹನಿಂದ ಯುತ ವಾ ದೃಷ್ಟ ಗುಳಿಕನು ಕರ್ಮದಲ್ಲಿ ಶತ್ರುಗಳಿಂದ ಪೀಡೆ, ಮೇಲಧಿಕಾರಿಗಳೊಂದಿಗೆ ವಾದ-ವಿವಾದ ಸಂಭವಿಸಿ ಸ್ಥಾನನಾಶ, ಪ್ರಗತಿಗೆತಡೆ, ಆತಂಕಗಳು, ಹೆತ್ತವರೊಡನೆ ಭೆದಾಭಿಪ್ರಾಯ, ಗೃಹದಲ್ಲಿ ಅಶಾಂತಿ, ಅಥವಾಜನ್ಮಸ್ಥಳ ತ್ಯಜಿಸಿ ಪರಊರಿನಲ್ಲಿ ವಾಸ ಸಂಭವಿಸುತ್ತದೆ. ಮಾನಹಾನಿ ಸಂಭವನೀಯ.

ಗುಳಿಕನು ಕುಜನ ಯುತಿಯಲ್ಲಿದ್ದಾಗ ಜನಿಸಿದವರು ಯಾಂತ್ರಿಕ ಉದ್ಯಮಗಳಲ್ಲಿ ನುರಿತವರು, ಕ್ರಾಂತಿಕಾರಕ ವಿಚಾರಗಳಿಂದ ಕೂಡಿದವರು ಆಗುತ್ತಾರೆ, ಗುಳಿಕನು ಶನಿಯಯುತಿಯಲ್ಲಿ ಇದ್ದಾಗ ಜನಿಸಿದವರು ಶ್ರಮಜೀವಿಗಳು, ಕರ್ಮಕ್ಕೆತಕ್ಕ ಪ್ರತಿಫಲ ಲಭಿಸದೆ ನಿರುತ್ಸಾಹದಿಂದ ಬಳಲುವವರು ಆಗುತ್ತಾರೆ. ಸ್ಥಾನನಾಶ ಸಂಭವಿಸುತ್ತದೆ. ಗುಳಿಕನು ರಾಹುವಿನ ಯುತಿಯಲ್ಲಿ ಇದ್ದಾಗ ಯಾಂತ್ರಿಕ ಅಥವಾ ವೈದ್ಯಕೀಯ ಉದ್ಯಮಗಳಲ್ಲಿ ನುರಿತವರಾಗುತ್ತಾರೆ. ವಂಚನೆ ಅಥವಾ ಮೋಸದಿಂದ ಪ್ರಗತಿಗೆ ಕುಂದು ಬರುತ್ತದೆ. ಗುಳಿಕನು ಕೇತುವಿನ ಯುತಿಯಲ್ಲಿದ್ದಾಗ ಕರ್ಮದಲ್ಲಿ ವಿಘ್ನಗಳು, ಆಗಾಗ್ಗೆ ಕರ್ಮದಲ್ಲಿ ಬದಲಾವಣೆಗಳು ಉಂಟಾಗುತ್ತವೆ. ಸೂಕ್ಷ್ಮಕೆಲಸಗಳಲ್ಲಿ ನುರಿತವರಾದರೂ ಆಲಸ್ಯತನದಿಂದ ಪ್ರಗತಿಹೊಂದುವುದಿಲ್ಲ.

ದಶಮದ ಗುಳಿಕನು ಶುಭಗ್ರಹದ ದೃಷ್ಟಿ ಅಥವಾ ಯುತಿಯಲ್ಲಿ ಇದ್ದರೆ. ಹಲವಾರು ಸಂಕಷ್ಟಗಳನ್ನು ಎದುರಿಸಿ ಧೈರ್ಯ ಮತ್ತು ಹಠಸಾಧನೆಯಿಂದ ಕರ್ಮದಲ್ಲಿ ಮುಂದುವರೆಯುತ್ತಾರೆ. ಇವರಲ್ಲಿ ಸಂಶೋಧನಾ ಪ್ರವೃತ್ತಿ ಇರುತ್ತದೆ. ಹಾಗೂ ನೂತನ ಆವಿಷ್ಕಾರಗಳನ್ನು ಕಂಡುಹಿಡಿಯುತ್ತಾರೆ. ವಾಹನ ಸುಖ ಲಭಿಸುತ್ತದೆ. ಸ್ವತಂತ್ರ ಉದ್ಯಮಗಳನ್ನು ಮಾಡುವ ಹಂಬಲ ಇದ್ದರೂ ಮಧ್ಯಪ್ರಾಯದ ವರೆಗೆ ಕಾರ್ಯಗತಗೊಳಿಸಲು ಅಸಮರ್ಥರು ಆಗುತ್ತಾರೆ. ಪತ್ನಿಯ ಆರೋಗ್ಯ ಮಧ್ಯಮ.

ಸಾಮಾನ್ಯವಾಗಿ ಕರ್ಮದ ಗುಳಿಕನಿಂದ ಕಾರ್ಯದಕ್ಷತೆ, ಕರ್ಮದಲ್ಲಿ ಸ್ಥಾನ-ಮಾನ, ಸಂಶೋಧನಾ ಪ್ರವೃತ್ತಿ, ಗೃಹದಲ್ಲಿ ಅಶಾಂತಿ ಇರುತ್ತದೆ.

## ೧೭. ಲಾಭದಲ್ಲಿ ಮಾಂದಿ

**ಬಲಾಢ್ಯೋ ಬಹುಭೃತ್ಯಶ್ಚ ಮಹಾವಿಭವ ಸಂಯುತ : ।**
**ಪರಕ್ಷೇತ್ರಾರ್ಥ ಸಂಭೂತೋ ಗುಳಿಕೇ ಲಾಭ ಸಂಸ್ಥಿತೇ ॥ ೫೯ ॥**

ಗುಳಿಕನು ಲಾಭದಲ್ಲಿದ್ದರೆ ಜಾತಕನು ಬಲಿಷ್ಠನು, ಅನೇಕ ಸೇವಕರು ಉಳ್ಳವನು, ಅತ್ಯಂತ ವೈಭವದಿಂದ ಕೂಡಿದವನು, ಪರರಭೂಮಿ, ಧನ, ಸಂಪತ್ತುಗಳನ್ನು ಅನುಭವಿಸುವವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:-**

**ಅತಿಸುಖಧನತೇಜೋ ರೂಪವಾನ್ ಲಾಭಯಾತೇ ।**
**ದಿನಕರಸುತಪುತ್ರೇ ಚಾಗ್ರಜಂ ಹಂತಿ ಜಾತಃ ॥ ೬೦ ॥**

ಗುಳಿಕನು ಲಾಭದಲ್ಲಿ ಇದ್ದರೆ ಅತ್ಯಂತ ಸುಖಉಳ್ಳವನು, ಧನವಂತನು ತೇಜಸ್ವಿಯು, ರೂಪವಂತನು, ಆಗುತ್ತಾನೆ. ಜ್ಯೇಷ್ಠ ಸಹೋದರನ ನಾಶ ಸಂಭವಿಸುತ್ತದೆ.

**ಫ. ದೀ.: ಸುಖ ಸುತ ಮತಿ ತೇಜ: ಕಾಂತಿಮಾನ್ ಲಾಭಸಂಸ್ಥೇ ।**

ಗುಳಿಕನು ಲಾಭದಲ್ಲಿ ಇದ್ದರೆ ಸುಖವಂತನು, ಪುತ್ರವಂತನು, ಬುದ್ಧಿವಂತನು, ತೇಜಸ್ವಿಯು, ಕಾಂತಿಯಿಂದ ಕೂಡಿದವನು ಆಗುತ್ತಾನೆ.

**ಪ್ರಶ್ನಮಾರ್ಗಮತ:-**

**ಕುರ್ಯಾಚ್ಚ ಪೌರುಷಯುತೋ ಧನವಾಹನಾರ್ಥಾನ್ ।**
**ಐಶ್ವರ್ಯವಾನ್ ಭವಗತೇ ಬಹುಭೃತ್ಯಯುಕ್ತ: ॥ ೬೧ ॥**

ಗುಳಿಕನು ಲಾಭದಲ್ಲಿ ಇದ್ದರೆ ಪೌರುಷದಿಂದ ಕೂಡಿದವನಾಗಿ ಧನ, ವಾಹನ, ಸಂಪತ್ತು, ದ್ರವ್ಯ, ಇತ್ಯಾದಿ ಗಳಿಸುತ್ತಾನೆ. ಐಶ್ವರ್ಯವಂತನಾಗಿ ಅನೇಕ ಭೃತ್ಯವರ್ಗದಿಂದ ಕೂಡಿದವನು ಆಗುತ್ತಾನೆ.

**ಪರಾಶರ ಮತ:-**

**ಸುಸ್ತ್ರೀ-ಭೋಗೀ ಪ್ರಜಾಧ್ಯಕ್ಷೋ ಬಂಧೂನಾಂ ಚ ಹಿತೇರತ: ।**
**ಲಾಭಸ್ಥೇ ಗುಲಿಕೇ ಜಾತೋ ನೀಚಾಂಗ: ಸಾರ್ವಭೌಮಕ: ॥ ೬೨ ॥**

ಗುಳಿಕನು ಲಾಭದಲ್ಲಿ ಇದ್ದರೆ ಉತ್ತಮವಾದ ಪತ್ನಿಉಳ್ಳವನು, ಭೋಗವಂತನು, ದಕ್ಷತೆಯಿಂದ ಜನಸೇವೆ ಮಾಡುವವನು, ಬಂಧುಗಳ ಹಿತಕಾರಕನು, ಗಿಡ್ಡವಾದ ಅಂಗಾಂಗ ಉಳ್ಳವನು, ಎಲ್ಲ ಕಡೆಗಳಲ್ಲಿ ಪೂಜಿಸಲ್ಪಡುವವನು, ಆಗುತ್ತಾನೆ.

## ಅನುಭವದಲ್ಲಿ ಕಂಡುಬಂದ ಫಲ:-

ಲಾಭಭಾವದಲ್ಲಿ ಗುಳಿಕನಿದ್ದರೆ ಜಾತಕನ ಲಾಭದ ಕೆಲಅಂಶವು ಮಿತ್ರರಿಂದ ಅಥವಾ ಸಾಲವ್ಯಾಪಾರದಿಂದ ಹಾನಿಯಾಗುತ್ತದೆ. ಧನಪ್ರಾಪ್ತಿ ಆಗುತ್ತದೆ ಸಂತಾನಚಿಂತೆ ಇರುತ್ತದೆ. ಹಿರಿಯ ಸಹೋದರರೊಡನೆ ಕಲಹ ಅಥವಾ ವಿರಹ ಉಂಟಾಗುತ್ತದೆ. ಪತ್ನಿಯಲ್ಲಿ ಸಿಡುಕು ಸ್ವಭಾವ ಇರುತ್ತದೆ. ಮಕ್ಕಳ ಆರೋಗ್ಯ ಪೀಡಿಸಲ್ಪಡುತ್ತದೆ.

ಗುಳಿಕನು ಪಾಪಗ್ರಹದಿಂದ ಯುತ ಅಥವಾ ದೃಷ್ಟನಾದಾಗ ವ್ಯವಹಾರದಲ್ಲಿ ನಷ್ಟ, ಹಿರಿಯಸಹೋದರನ ಅಕಾಲಮರಣ, ಸಂತಾನದಿಂದ ಹಾನಿ, ಮಿತ್ರರಿಂದ ವಂಚನೆ ಸಂಭವಿಸುತ್ತದೆ. ಗುಳಿಕನು ಕುಜನ ಯುತಿಯಲ್ಲಿ ಇದ್ದಾಗ ಜನಿಸಿದವರು ಭೂಸಂಬಂಧ ವಿವಾದದಿಂದ ಹಾನಿಗೀಡಾಗುತ್ತಾರೆ. ಹಿರಿಯ ಸಹೋದರನಿಗೆ ಯಂತ್ರ ಅಥವಾ ವಾಹನದಿಂದ ಅಪಘಾತ ಸಂಭವಿಸುತ್ತದೆ. ಗುಳಿಕನು ಶನಿಯ ಯುತಿಯಲ್ಲಿದ್ದಾಗ ದತ್ತಪುತ್ರಯೋಗ, ಕೈಕೆಳಗಿನ ನೌಕರರಿಂದ ಹಾನಿ, ಕಾಲುನೋವು, ಪ್ರಥಮತ ಲಾಭದ ಹಾನಿಯಾದರೂ ದೀರ್ಘ ಕಾಲದ ನಂತರ ಲಾಭಪ್ರಾಪ್ತಿ ಆಗುತ್ತದೆ. ಗುಳಿಕನು ರಾಹುವಿನ ಯುತಿಯಲ್ಲಿ ಇದ್ದಾಗ ನೀಚರಿಂದ ಅವಮಾನ, ಕಳ್ಳತನದಿಂದ ಹಾನಿ ಸಂಭವಿಸುತ್ತದೆ. ಗುಳಿಕನು ಕೇತುವಿನ ಯುತಿಯಲ್ಲಿದ್ದಾಗ ಹಿರಿಯ ಸಹೋದರನಿಗೆ ಗುಣಪಡಿಸಲು ಕಷ್ಟಸಾಧ್ಯವಾದ ವ್ಯಾಧಿ, ಅವನ ಮರಣವು ಸಂಶಯಾಸ್ಪದ ರೀತಿಯಲ್ಲಿ ಸಂಭವಿಸುತ್ತದೆ.

ಗುಳಿಕನು ಶುಭಗ್ರಹದಿಂದ ದೃಷ್ಟ ಅಥವಾ ಯುತನಾದಾಗ ಹಲವಾರು ಅಡ್ಡಿಆತಂಕಗಳನ್ನು ಎದುರಿಸಿ ವ್ಯಾಪಾರ ವ್ಯವಹಾರಗಳಲ್ಲಿ ಅಭಿವೃದ್ಧಿ ಹೊಂದುತ್ತಾರೆ, ವಾಹನಸುಖ, ಭೂಮಿಲಾಭ ಮತ್ತು ಉತ್ತಮಸೇವಕರು ಲಭಿಸುತ್ತಾರೆ ಕರ್ಮಕ್ಷೇತ್ರದಲ್ಲಿ ಅಧಿಕಲಾಭ ಮತ್ತು ಕೀರ್ತಿ ಲಭಿಸುತ್ತದೆ.

ಸಾಮಾನ್ಯವಾಗಿ ಏಕಾದಶದ ಗುಳಿಕನಿಂದ ಲಾಭದ ಕೆಲವು ಅಂಶನಷ್ಟ, ಸಂತಾನಚಿಂತೆ ಮತ್ತು ಹಿರಿಯ ಸಹೋದರರೊಡನೆ ವಿರಸ ಉಂಟಾಗುತ್ತದೆ.

## ೧೮. ವ್ಯಯದಲ್ಲಿ ಮಾಂದಿ

**ಕುನಖೀ ವಿಕಲಾಂಗಶ್ಚ ನೀಚವೃತ್ತಿ: ಪರಾಶ್ರಿತ: ।**
**ದುಃಸ್ವಪ್ನ ಭಯಯುಕ್ತಶ್ಚ ಗುಳಿಕೇ ದ್ವಾದಶಸ್ಥಿತೇ ॥ ೬೩ ॥**

ಗುಳಿಕನು ದ್ವಾದಶದಲ್ಲಿ ಇದ್ದರೆ ಕೆಟ್ಟದಾದ ಉಗುರುಳ್ಳವನು, ಅಂಗವೈಕಲ್ಯ ಉಳ್ಳವನು, ನೀಚ ವೃತ್ತಿಯಲ್ಲಿ ಅನುರಕ್ತನು, ಪರರಆಶ್ರಯದಲ್ಲಿ ಇರುವವನು ದು: ಸ್ವಪ್ನಗಳಿಂದ ಮತ್ತು ಭಯದಿಂದ ಪೀಡಿಸಲ್ಪಡುವವನು ಆಗುತ್ತಾನೆ.

**ಜಾತಕ ಪಾರಿಜಾತ ಮತ:-**

**ವಿಷಯರಹಿತವೇಷೋ ದೀನವಾಕ್ಯ: ಪ್ರವೀಣೋ । ನಿಖಿಲಧನಹರ: ಸ್ಯಾನ್ಮಂದಜೇ ರಿ:ಫಯಾತೇ ॥ ೬೪ ॥**

ಗುಳಿಕನು ದ್ವಾದಶದಲ್ಲಿದ್ದರೆ ವಿಷಯಾಭಿಲಾಷೆ ಇಲ್ಲದವನು, ಸಾಮಾನ್ಯನಂತೆ ಉಳ್ಳವನು, ಮಾತಿನಲ್ಲಿ ದೀನತೆ ಇರುತ್ತದೆ. ಪ್ರವೀಣನು, ಸಕಲ ಧನವನ್ನು ಅಪಹರಿಸುವವನು ಆಗುತ್ತಾನೆ.

**ಫಲದೀಪಿಕಾ ಮತ:-**

**ವಿಷಯ ವಿರಹಿತೋ ದೀನೋ ಬಹುವ್ಯಯ: ಶಾದ್ವ್ಯಯೋ ಗುಲಿಕಸಂಸ್ಥೇ ।**

ಗುಳಿಕನು ದ್ವಾದಶದಲ್ಲಿದ್ದರೆ ವಿಷಯಾಭಿಲಾಷೆ ಇಲ್ಲದವನು, ದೀನನು, ಅತಿಹೆಚ್ಚು ಖರ್ಚುಮಾಡುವವನು ಆಗುತ್ತಾನೆ.

**ಪರಾಶರ ಮತ:-**

**ನೀಚಕರ್ಮಾಶ್ರಿತ: ಪಾಪೋ ಹೀನಾಂಗೋ ದುರ್ಭಗೋಽಲಸ ।**
**ವ್ಯಯಗೇ ಗುಲಿಕೇ ಜಾತೇ ನಿಚೇಶು ಕುರುತೇ ರತಿಮ್ ॥ ೬೫ ॥**

ಗುಳಿಕನು ದ್ವಾದಶದಲ್ಲಿದ್ದರೆ ನೀಚಕೃತ್ಯಗಳನ್ನು ಮಾಡುವವನು, ಪಾಪಿಯು, ಅಂಗವೈಕಲ್ಯ ಉಳ್ಳವನು, ದುರ್ಭಾಗ್ಯನು, ಆಲಸಿಯು, ನೀಚಸ್ತ್ರೀಸಂಗ ಮಾಡುವವನು ಆಗುತ್ತಾನೆ.

**ಪ್ರಶ್ನಮಾರ್ಗ ಮತ:-**

**ದು: ಸ್ವಪ್ನವಾಂಶ್ಚ ಕುನಖೀ ವಿಕಲೋ ವ್ಯಯಸ್ಥೇ ॥ ೬೬ ॥**

ಗುಳಿಕನು ದ್ವಾದಶದಲ್ಲಿದ್ದರೆ ದುಸ್ವಪ್ನದಿಂದ ಪೀಡಿಸಲ್ಪಡುವವನು, ಕೆಟ್ಟ ಉಗುರುಗಳಿರುವವನು, ತೇಜಸ್ಸಿಲ್ಲದವನು ಆಗುತ್ತಾನೆ.

**ಅನುಭವದಲ್ಲಿ ಕಂಡುಬಂದ ಫಲ:-**

ವ್ಯಯಭಾವದಲ್ಲಿ ಗುಳಿಕನಿದ್ದರೆ ನಿದ್ರಾನಾಶ ಹಾಗೂ ದು:ಸ್ವಪ್ನಗಳಿಂದ ಪೀಡಿಸಲ್ಪಡುತ್ತಾರೆ. ಇವರು ಆರ್ಥಿಕ ವ್ಯವಹಾರದಲ್ಲಿ ತಮಗೆ ನಷ್ಟವಾಗದಂತೆ ಜಾಗರೂಕತೆಯಿಂದ ಕಾರ್ಯಕಲಾಪಗಳನ್ನು ನಿರ್ವಹಿಸುತ್ತಾರೆ. ಇವರಲ್ಲಿ ಸ್ವಾರ್ಥಪ್ರಿಯತೆ ಮತ್ತು ಕೃಪಣತ್ವ ಕಂಡುಬರುತ್ತದೆ. ಸಂಚಾರದಲ್ಲಿ ಆಸಕ್ತಿ ಇರುತ್ತದೆ ಅಥವಾ ಸಂಚಾರ ಉದ್ಯೋಗಗಳನ್ನು ನಿರ್ವಹಿಸುತ್ತಾರೆ.

ಗುಳಿಕನು ಪಾಪಗ್ರಹನ ಯುತಿ ಅಥವಾ ದೃಷ್ಟಿಯಲ್ಲಿದ್ದರೆ ಜಾತಕನಲ್ಲಿ ವ್ಯಭಿಚಾರ ಪ್ರವೃತ್ತಿ, ಆಲಸ್ಯತನ, ಕೋಪ ದುಂದುಗಾರಿಕೆ ಸ್ವಬಾವ ಕಂಡು ಬರುತ್ತದೆ. ಗುಳಿಕನು ಕುಜನ ಯುತಿಯಲ್ಲಿದ್ದಾಗ ಅಗ್ನಿಯಿಂದ ಹಾನಿ, ಅಥವಾ ಕಾಲುಗಳ ಶಸ್ತ್ರಚಿಕಿತ್ಸೆ ಮತ್ತು ದಾಂಪತ್ಯ ಸುಖದಹಾನಿ ಉಂಟಾಗುತ್ತದೆ. ಗುಳಿಕನು ಶನಿಯಯುತಿಯಲ್ಲಿದ್ದಾಗ ಕಾಲುನೋವು, ನಿದ್ರಾನಾಶ, ನರಗಳ ದುರ್ಬಲತೆ ತನ್ನ ಸುಖಕ್ಕೋಸ್ಕರ ಅಧಿಕಖರ್ಚು, ಮತ್ತು ಸಂಚಾರ ಉದ್ಯೋಗದಿಂದ ಅಭಿವ-ದ್ಧಿ ಹೊಂದುತ್ತಾರೆ. ರಾಹುವಿನ ಯುತಿಯಲ್ಲಿದ್ದಾಗ ದುಶ್ಚಟಗಳಿಂದ ಧನನಾಶ, ಪ್ರಯಾಣದಲ್ಲಿ ಅವಘಡಗಳು ಸಂಭವಿಸುತ್ತದೆ. ಕೇತುವಿನ ಯುತಿಯಲ್ಲಿದ್ದಾಗ ಸದ್ವಿನಿಯೋಗ ಪ್ರವೃತ್ತಿ ಇರುತ್ತದೆ.

ಗುಳಿಕನು ಶುಭಗ್ರಹರ ಯುತಿ ಅಥವಾ ದೃಷ್ಟಿಯಲ್ಲಿದ್ದರೆ ಧಾರ್ಮಿಕ ಪ್ರವೃತ್ತಿ, ಸತ್ಕರ್ಮ-ಸದ್ವಿನಿಯೋಗಗಳು, ಜ್ಞಾನಾರ್ಜನೆ, ತೀರ್ಥಯಾತ್ರೆ ಇತ್ಯಾದಿ ಆಗುತ್ತದೆ.

ಸಾಮಾನ್ಯವಾಗಿ ವ್ಯಯದ ಗುಳಿಕನಿಂದ ಕೃಪಣತ್ವ, ನಿದ್ರಾನಾಶ ಮತ್ತು ಆತ್ಮಾಭಿಮಾನದ ಅಭಾವ ಕಂಡುಬರುತ್ತದೆ.

ಗುಳಿಕಸ್ಥಿತ ರಾಶ್ಯಾಧಿಪನು ಬಲಿಷ್ಠನಾಗಿ ಸ್ವಕ್ಷೇತ್ರ, ಉಚ್ಚ, ಮಿತ್ರಕ್ಷೇತ್ರಗಳಲ್ಲಿದ್ದರ ಅಥವಾ ಶುಭಗ್ರಹರಿಂದ ದೃಷ್ಟ ಅಥವಾ ಯುತನಾದರೆ

ಗುಳಿಕಸ್ಥಿತ ಭಾವಫಲಗಳಲ್ಲಿ ಶುಭಫಲಗಳು ಲಭಿಸುತ್ತವೆ, ಮತ್ತು ಅಶುಭಫಲಗಳು ಲಘುವಾಗುತ್ತದೆ. ಗುಳಿಕಸ್ಥಿತ ರಾಶ್ಯಾಧಿಪತಿಯು ನಿರ್ಬಲ ಅಥವಾ ದೂಷಿತನಾದಾಗ ಅಶುಭಫಲಗಳು ಪುಷ್ಟವಾಗಿ ಶುಭಫಲಗಳು ಲಘುವಾಗುತ್ತದೆ. ಗುಳಿಕಸ್ಥಿತ ರಾಶ್ಯಾಧಿಪತಿಯನ್ನು ಆಧರಿಸಿ ಗುಳಿಕನ ಶುಭಾಶುಭ ಫಲಗಳಲ್ಲಿ ವ್ಯತ್ಯಾಸ ಉಂಟಾಗುತ್ತದೆ.

## ೧೯. ಗುಳಿಕಯುತಿ ಫಲ

**ರವಿಯುಕ್ತೇ ಪಿತೃಹಂತಾ ಮಾತೃಕ್ಲೇಶಿ ನಿಶಾಪಸಂಯುಕ್ತೇ । ಭ್ರಾತೃವಿಯೋಗಃ ಸ ಕುಜೇ ಬುಧಯುಕ್ತೇ ಮಂದಜೇ ಚ ಸೋನ್ಮಾದಿ ॥ ಫಲದೀಪಿಕಾ ॥ ೬೭ ॥**

ಗುಳಿಕನು ರವಿಯಯುತಿಯಲ್ಲಿ ಇದ್ದರೆ ತಂದೆಯನ್ನು ನಾಶಮಾಡುವವನು ಚಂದ್ರನಯುತಿಯಲ್ಲಿದ್ದರೆ ತಾಯಿಗೆ ದುಃಖವನ್ನು ನೀಡುವವನು, ಕುಜನ ಯುತಿಯಲ್ಲಿದ್ದರೆ ಭ್ರಾತೃವಿಯೋಗ, ಬುಧನಯುತಿಯಲ್ಲಿ ಉನ್ಮಾದದಿಂದ ಪೀಡಿತನು ಆಗುತ್ತಾನೆ.

**ಗುರುಯುಕ್ತೇ ಪಾಷಂಡೀ ಶುಕ್ರಯುಕ್ತೇ ನೀಚ ಕಾಮಿನೀಸಂಗಃ। ಶನಿಯುಕ್ತೇ ಶನಿಪುತ್ರೇ ಕುಷ್ಠವ್ಯಾಧ್ಯರ್ದಿತಶ್ಚ ಸೋಲ್ಪಾಯುಃ॥**

ಗುಳಿಕನು ಗುರುವಿನ ಯುತಿಯಲ್ಲಿದ್ದರೆ ಧರ್ಮದ್ವೇಷಿಯು, ಶುಕ್ರನ ಯುತಿಯಲ್ಲಿದ್ದರೆ ನೀಚಸ್ತ್ರೀಯರ ಸಂಗ ಮಾಡುವವನು, ಶನಿಯಯುತಿಯಲ್ಲಿದ್ದರೆ ಕುಷ್ಠಾದಿ ಮಹಾವ್ಯಾಧಿಗಳಿಂದ ಪೀಡಿಸಲ್ಪಟ್ಟವನು, ಅಲ್ಪಾಯುವು ಆಗುತ್ತಾನೆ.

**ಸಂಯುಕ್ತೇ ಯದಿ ಭಾಸ್ಕರೇಣಗುಲಿಕೇ ಜಾತಃ ಪಿತೃದ್ವೇಷಕೋ ಮಾತೃಕ್ಲೇಶಕರಸ್ತು ಶೀತರುಚಿನಾ ಭೌಮೇನ ವೀತಾನುಜಃ । ಸೋನ್ಮಾದಃ ಶಶಿಜೇನ ದೇವಗುರುಣಾ ಪಾಖಂಡಕೋ ದೂಷಕಃ ಶುಕ್ರೇಣ ಪ್ರಮದಾಕೃತಾಮಯಹತೋ ನೀಚಾಂಗನಾ ವಲ್ಲಭಃ ॥ ಜಾತಕ ಪಾರಿಜಾತ ॥ ೬೯ ॥**

ಗುಳಿಕನು ರವಿಯಯುತಿಯಲ್ಲಿದ್ದರೆ ತಂದೆಯನ್ನು ದ್ವೇಷಿಸುವವನು, ಚಂದ್ರನಯುತಿಯಲ್ಲಿದ್ದರೆ ತಾಯಿಗೆ ದುಃಖವನ್ನು ನೀಡುವವನು,

ಕುಜನಯುತಿಯಲ್ಲಿ ಇದ್ದರೆ ತಮ್ಮಂದಿರ ವಿರಹ, ಬುಧನ ಯುತಿಯಿಂದ ಉನ್ಮಾದ, ಗುರುವಿನ ಯುತಿಯಿಂದ ಪಾಖಂಡಿಯು, ಪರನಿಂದಕನು, ಶುಕ್ರನಯುತಿಯಲ್ಲಿದ್ದರೆ ಸ್ತ್ರೀಜನಿತ ರೋಗಗಳಿಂದ ಹತನಾಗುತ್ತಾನೆ. ಅಥವಾ ನೀಚ ಸ್ತ್ರೀಯ ಪತಿಯು ಆಗುತ್ತಾನೆ.

**ಜಾತ: ಸೌಖ್ಯರತಸ್ತು ಮಂದತನಯೇ ಮಂದೇನ ಯುಕ್ತೇಯದಾ**
**ಸರ್ಪೇಣೈವ ವಿಷಪ್ರದಸ್ತು ಶಿಖಿನಾ ವಹ್ನಿಪ್ರದೋ ಜಾಯತೇ ।**
**ಭಿಕ್ಷು: ಸ್ಯಾದ್ವಿಷನಾಡಿಯುಕ್ತಗ್ರಹಗೇ ಭೂಪಾಲಕೋಪಿ ಧ್ರುವಂ**
**ಜ್ಯಾತಸ್ಕೋಪ ಖಗಾನ್ವಿತಾ ಗಗನಗಾ: ಕುರ್ವಂತ್ಯನಿಷ್ಟಂ ಫಲಮ್ ॥**
**॥ ಜಾತಕ ಪಾರಿಜಾತ ॥ ೭೦ ॥**

ಗುಳಿಕನು ಶನಿಯ ಯುತಿಯಲ್ಲಿದ್ದರೆ ಸುಖವಂತನು, ರಾಹುವಿನ ಯುತಿಯಿಂದ ವಿಷಪ್ರದನು, ಕೇತುವಿನ ಯುತಿಯಿಂದ ಬೆಂಕಿಯಂತೆ ತೀಕ್ಷ್ಣನು ಆಗುತ್ತಾನೆ.

ಗುಳಿಕನು ವಿಷನಾಡಿ (ವಿಷಗಳಿಗೆ) ಯೊಂದಿಗೆ ಯುತನಾದರೆ ರಾಜನಾದರೂ ಭಿಕ್ಷುಕನಾಗುತ್ತಾನೆ. ಉಪಗ್ರಹರಿಂದ ಯುತನಾದರೆ ಜಾತಕನಿಗೆ ಅನಿಷ್ಟ ಫಲಗಳು ಲಭಿಸುತ್ತವೆ.

**ವಿಷರೋಗೀ ರಾಹುಯುತೇ ಶಿಖಿಯುಕ್ತೇ ವಹ್ನಿಪೀಡಿತೋ ವಾಂದೌ । ಗುಲಿಕಸ್ತ್ಯಾಜ್ಯಯುತಶ್ಚೇತ್ತಸ್ಮಿಂಜಾತೋ ನೃಪೋಪಿ ಭಿಕ್ಷಾಶೀ ॥ ಫಲದೀಪಿಕಾ ॥ ೭೧ ॥**

ಗುಳಿಕನು ರಾಹುವಿನ ಯುತಿಯಲ್ಲಿದ್ದರೆ ವಿಷದಿಂದ ಪೀಡಿಸಲ್ಪಟ್ಟು, ರೋಗ ಸಂಭವಿಸುತ್ತದೆ. ಕೇತುವಿನಿಂದ ಯುತನಾದರೆ ಬೆಂಕಿಯಿಂದ ಪೀಡಿಸಲ್ಪಡುತ್ತಾನೆ. ತ್ಯಾಜ್ಯಕಾಲವಾದ ವಿಷಗಳಿಗೆಯಿಂದ ಯುತನಾದಾಗ ರಾಜನಾದರೂ ಭಿಕ್ಷಾನ್ನವನ್ನು ತಿನ್ನುವವನು ಆಗುತ್ತಾನೆ.

**ಗುಳಿಕಸ್ಯತು ಸಂಯೋಗೇ ದೋಷಾನರ್ವತ್ರ ನಿರ್ದಿಶೇತ್।**
**ಯಮಕಂಟಕ ಸಂಯೋಗೇ ಸರ್ವತ್ರ ಕಥಯೇತ್ಶುಭಮ್ ॥ ೭೧ ॥**

ಗುಳಿಕನಯುತಿಯು ಸರ್ವತ್ರ ದೋಷವನ್ನು ಸೂಚಿಸುತ್ತದೆ. ಯಮಕಂಟಕನ ಯುತಿಯು ಸರ್ವತ್ರಶುಭವನ್ನು ಸೂಚಿಸುತ್ತದೆ.

**ರಾಹೌ ವಿಲಗ್ನೇ ಸುಕುಜೇರ್ಕಪುತ್ರೇ ಸಾಹೌ ಬೃಹದ್ಬೀಜಮಿ- ವಾಹುರಾರ್ಯಾ: । ಲಗ್ನೇಶ್ವರೇ ಮೃತ್ಯುಗತೇ ಸರಾಹೌ ರಂಧ್ರೇ ಸಮಾಂದೌ ಚ ತಥೈವ ವಾಚ್ಯಮ್ ॥ ೭೩ ॥ ಲಗ್ನೇ ಸರಾಹೌ ಗುಲಿಕೇ ತ್ರಿಕೋಣೇ ರಂಧ್ರೆ ಕುಜೇ ಮಂದಯುತೇ ತಥೈವ । ಲಗ್ನೇಶ್ವರಾ ಕ್ರಾಂತತದಂಶನಾಥೇ ರಾಹ್ವಾರಮಾಂದ್ಯಾರ್ಕಿಯುತೇ ತಥೈವ ॥ ॥ ಜಾತಕ ಪಾರಿಜಾತ ॥ ೭೪ ॥**

1. ಕುಜ ಮತ್ತು ಶನಿಯು ರಾಹುವಿನ ಯುತಿಯಲ್ಲಿ ಲಗ್ನದಲ್ಲಿದ್ದರೆ ಜಾತಕನಿಗೆ ಬೃಹದ್‌ಬೀಜ (ಅಂಡವೃದ್ಧಿ) ಆಗುತ್ತದೆ.

2. ಲಗ್ನಾಧಿಪತಿಯು ರಾಹು ಅಥವಾ ಮಾಂದಿಯ ಯುತಿಯಲ್ಲಿ ಅಷ್ಟಮಭಾವದಲ್ಲಿ ಇದ್ದರೆ ಜಾತಕನಿಗೆ ಬೃಹದ್‌ಬೀಜ ಆಗುತ್ತದೆ.

3. ಲಗ್ನದಲ್ಲಿ ರಾಹು, ತ್ರಿಕೋಣದಲ್ಲಿ ಮಾಂದಿ ಮತ್ತು ಕುಜನು ಶನಿಯ ಯುತಿಯಲ್ಲಿ ಅಷ್ಟಮಭಾವದಲ್ಲಿ ಇದ್ದರೆ ಜಾತಕನಿಗೆ ಬೃಹದ್‌ಬೀಜ ಆಗುತ್ತದೆ.

4. ಲಗ್ನಾಧಿಪತಿಯುಸ್ಥಿತ ನವಾಂಶಾಧಿಪನು, ರಾಹು, ಕುಜ, ಮಾಂದಿ ಮತ್ತು ಶನಿಯ ಯುತಿಯಲ್ಲಿ ಇದ್ದರೆ ಜಾತಕನಿಗೆ ಬೃಹತ್‌ಬೀಜ ಆಗುತ್ತದೆ.

**ಪಾಪೇ ತೃತೀಯೇ ಗಲರೋಗಮತ್ರ ವದಂತಿ ಮಾಂದ್ಯಾದಿಯುತೇ ವಿಶೇಷಾತ್ ।ಭೌಮಾನ್ವಿತೇ ಪ್ರೇತಪುರೀಶಭಾಗೇ ತೃತೀಯರಾಶೌ ಯದಿ ಕರ್ಣರೋಗಮ್ ॥ ಚಿಂತಾಮಣಿ ॥ ೭೫ ॥**

1. ಪಾಪಗ್ರಹನು ತೃತೀಯಭಾವದಲ್ಲಿ ಮಾಂದಿಯ ಯುತಿಯಲ್ಲಿದ್ದರೆ ವಿಶೇಷವಾಗಿ ಕುತ್ತಿಗೆಯ ರೋಗ ಉಂಟಾಗುತ್ತದೆ.

2. ಕುಜನು ಗುಳಿಕನ ಅಂಶದಲ್ಲಿ ತೃತೀಯಭಾವದಲ್ಲಿ ಇದ್ದರೆ ಕಿವಿರೋಗ ಉಂಟಾಗುತ್ತದೆ.

**ಕಾಸಶ್ವಾಸಕ್ಷಯಜನಿರುಜಂ ಭಾನುಭೌಮಾಹಿದೃಷ್ಟೇ । ಷಷ್ಠೇ ಸೌರೇಗುಲಿಕಸಹಿತೇ ಸೌಮ್ಯದೃಗ್ಯೋಗಹೀನೇ ॥ಜಾ.ಪಾ. ॥೭೬॥**

ಶನಿಯು ಗುಳಿಕನಯುತಿಯಲ್ಲಿ ಷಷ್ಠಭಾವದಲ್ಲಿದ್ದು, ಶುಭಗ್ರಹನ ದೃಷ್ಟಿ ಅಥವಾ ಯುತಿ ಇಲ್ಲದೆ, ರವಿ, ಕುಜ ಮತ್ತು ರಾಹುವಿನಿಂದ ನೋಡಲ್ಪಟ್ಟರೆ ಜಾತಕನಿಗೆ ಕೆಮ್ಮು, ಉಬ್ಬಸ ಅಥವಾ ಕ್ಷಯರೋಗ ಉಂಟಾಗುತ್ತದೆ.

**ಶನ್ಯಾರಯೋಗೇ ಗುಲಿಕೇನ ಯುಕ್ತೇ ನೇತ್ರೇಶ್ವರೇ ತತ್ರ ತು ನೇತ್ರ ರೋಗ: । ನೇತ್ರೇ ಯದಾ ಪಾಪಬಹುತ್ವಯೋಗೇ ಯಮೇನ ದೃಷ್ಟೇ ಸತಿ ರುಗ್ಣನೇತ್ರ: ॥ ಜಾತಕ ಪಾರಿಜಾತ ॥ ೭೭ ॥**

1. ಶನಿ, ಕುಜ ಮತ್ತು ಗುಳಿಕನು ದ್ವಿತೀಯಭಾವದಲ್ಲಿ ಧನಾಧಿಪತಿಯ ಯುತಿಯಲ್ಲಿ ಇದ್ದರೆ ಕಣ್ಣಿನರೋಗಗಳು ಉಂಟಾಗುತ್ತವೆ.

2. ಹೆಚ್ಚು ಪಾಪಗ್ರಹರು ದ್ವಿತೀಯಭಾವದಲ್ಲಿದ್ದು ಶನಿಯಿಂದ ನೋಡಲ್ಪಟ್ಟರೆ ರೋಗಗ್ರಸ್ತ ಕಣ್ಣುಳ್ಳವನು ಆಗುತ್ತಾನೆ.

**ಪಾಪೈರ್ಯುತೇ ಮುಖಸ್ಥಾನೇ ದುರ್ಮುಖ: ಪಾಪವೀಕ್ಷಿತೇ । ಕ್ರೋಧಾನನೋ ನರ: ಪಾಪೀ ತದಿಶೇ ಗುಲಿಕಾನ್ವಿತೇ ॥ ೭೮ ॥**

1. ದ್ವಿತೀಯಭಾವದಲ್ಲಿ ಪಾಪಗ್ರಹರಿದ್ದರೆ. ಜಾತಕನು ದುರ್ಮುಖನು, (ತೀಕ್ಷ್ಣವಾದ ಮಾತುಗಳನ್ನು ಆಡುವವನು) ಆಗುತ್ತಾನೆ. 2. ಈ ದ್ವಿತೀಯ ಭಾವವನ್ನು ಪಾಪಗ್ರಹನು ನೋಡಿದರೆ ಜಾತಕನು ಕ್ರೋಧಉಳ್ಳ ಮುಖಉಳ್ಳವನು ಆಗುತ್ತಾನೆ. 3. ಧನಾಧಿಪತಿಯು ಗುಳಿಕನ ಯುತಿಯಲ್ಲಿದ್ದರೆ, ಜಾತಕನು ಪಾಪಿಷ್ಠನು ಆಗುತ್ತಾನೆ.

**ಭ್ರಾತೃಸ್ಥಾನಾಧಿಪಸ್ಯಾಂಶರಾಶೀಶೇ ನಾಶರಾಶಿಗೇ । ನೀಚಾರಾತಿಗತೇ ಮೂಢೇ ತ್ವಾಹು: ಸೋದರನಾಶನಮ್ ॥ ೭೯ ॥ ಶನಿಮಾಂದಿ ಸಮಾಯುಕ್ತೇ ಪಾಪಖೇಚರ ವೀಕ್ಷಿತೇ । ತದೀಶೇ ನೀಚರಾಶಿಸ್ಥೇ ಸೋದರಾಣಾಂ ವಿನಾಶನಮ್ ॥ ಚಿಂತಾಮಣಿ ॥ ೮೦ ॥**

1. ತೃತೀಯಾಧಿಪನ ನವಾಂಶಾಧಿಪನು ಸ್ಥಿತ, ರಾಶ್ಯಾಧಿಪನು ಅಷ್ಟಮಭಾವದಲ್ಲಿ, ನೀಚ, ಶತ್ರುಕ್ಷೇತ್ರ ಅಥವಾ ಅಸ್ತಂಗತನಾದರೆ ಜಾತಕನ ಸಹೋದರನಾಶ ಆಗುತ್ತದೆ.

2. ಶನಿ-ಮಾಂದಿ ಯುತಿಯು ತೃತೀಯಭಾವದಲ್ಲಿದ್ದು, ಪಾಪಗ್ರಹರಿಂದ ನೋಡಲ್ಪಡಬೇಕು, ಮತ್ತು ತೃತೀಯಾಧಿಪನು ನೀಚರಾಶಿಯಲ್ಲಿ ಇದ್ದರೆ ಜಾತಕನ ಸಹೋದರನಾಶ ಆಗುತ್ತದೆ.

**ಕ್ರಮಾಚ್ಚರಾಗದ್ವಿಶರೀರ ಭಾನಾಮುಪಾಂತ್ಯ ಧರ್ಮಸ್ಮರಗಾಸ್ತ - ದೀಶಾ । ಖರೇಶಮಾಂದಿಸ್ಥಿತ ರಾಶಿನಾಥಾ ಹ್ಯತೀವ ಬಾಧಾಕರ - ಖೇಚರಾ: ಸ್ಯು: ॥ ಜಾತಕ ಪಾರಿಜಾತ ॥ ೮೧ ॥**

1. ಚರರಾಶಿಗೆ ಏಕಾದಶ, ಸ್ಥಿರರಾಶಿಗೆ ನವಮ ಮತ್ತು ಉಭಯ ರಾಶಿಗೆ ಸಪ್ತಮವು ಬಾಧಕಸ್ಥಾನ ಆಗಿರುತ್ತದೆ.

2. ಬಾಧಕರಾಶಿ ಅಥವಾ ಬಾಧಕಾಧಿಪನು ಖರದ್ರೇಕ್ಕಾಣಾಧಿಪ, ಅಥವಾ ಮಾಂದಿಭವನಾಧಿಪನು ಕೂಡಾ ಆಗಿದ್ದರೆ, ಆ ಗ್ರಹನು ಅತೀವ ಬಾಧೆಯನ್ನು ನೀಡುತ್ತಾನೆ.

## ೨೦. ಮಾಂದಿಯನ್ನು ಆಧರಿಸಿ ಲಗ್ನಶೋಧನೆ

**ಮಾಂದಿಸ್ಥರಾಶಿಪತಿಸಂಗತ ಸುತ್ರಿಕೋಣಂ ತಸ್ಯಾಂಶರಾಶಿಪತಿ ಸಂಯುತಮಂಶಕೋಣಮ್ । ಲಗ್ನಂವದಂತಿ ಗುಲಿಕಾಂಶಕರಾಶಿ ಕೋಣಂ ತದ್ವದ್ವಿಧೌ ಬಲಯುತೇ ಶಶಿನೈವ ವಿದ್ಯಾತ್ ॥ ೮೨ ॥**

ಜನ್ಮಲಗ್ನವನ್ನು ತಿಳಿಯಲು ಜನನಕಾಲದ ಮಾಂದಿಸ್ಥಿತ ರಾಶ್ಯಾಧಿಪನನ್ನು ಗುರುತಿಸಿ, ಈ ಮಾಂದಿ ರಾಶ್ಯಾಧಿಪಸ್ಥಿತ ರಾಶಿ ಅಥವಾ ಅಂಶರಾಶಿಯ ತ್ರಿಕೋಣಗಳಲ್ಲಿ ಜನ್ಮಲಗ್ನವು ಇರುತ್ತದೆ. ಜನನ ಕಾಲದಲ್ಲಿ ಚಂದ್ರನು ಬಲಿಷ್ಠನಾಗಿದ್ದರೆ ಚಂದ್ರರಾಶ್ಯಾಧಿಪಸ್ಥಿತ ರಾಶಿ ಅಥವಾ ನವಾಂಶ ತ್ರಿಕೋಣಗಳಲ್ಲಿ ಜನ್ಮಲಗ್ನವು ಇರುತ್ತದೆ.

| | | | |
|---|---|---|---|
| | | ಚಂದ್ರ ೧ | |
| ರಾಹು ೭ | ಮಾದರಿ ಜಾತಕ - 4 | | |
| ಲಗ್ನ ೩<br>ಶನಿ ೩ | ತಾ. 4-11-1933<br>ಮಧ್ಯಾಹ್ನ 12-50 | | ಕೇತು ೧ |
| ಶುಕ್ರ ೨ | ಬುಧ ೭<br>ಕುಜ ೧೧ | ರವಿ ೧೨<br>ಮಾಂದಿ ೨ | ಗುರು ೩ |

ಶಿಷ್ಟ ಚಂದ್ರದಶಾವರ್ಷ 9. ಮಾಸ 5 ದಿನ 24

ಮಾದರಿಜಾತಕ 4ರಲ್ಲಿ ಗುಳಿಕನು ಶುಕ್ರಕ್ಷೇತ್ರವಾದ ತುಲೆಯಲ್ಲಿ ಇದ್ದಾನೆ, ಮಾಂದಿರಾಶ್ಯಾಧಿಪ ಶುಕ್ರನು ವೃಷಭನವಾಂಶದಲ್ಲಿ ಇದ್ದಾನೆ. ವೃಷಭದ ತ್ರಿಕೋಣವಾದ ಮಕರರಾಶಿಯು ಜನ್ಮಲಗ್ನ ಆಗಿರುತ್ತದೆ. ಚಂದ್ರನು ಉಚ್ಚನಾಗಿ ಬಲಿಷ್ಠನು ಆಗಿದ್ದಾನೆ. ಚಂದ್ರರಾಶ್ಯಾಧಿಪ ಮತ್ತು ಮಾಂದಿರಾಶ್ಯಾಧಿಪ ಶುಕ್ರನೇ ಆಗಿರುತ್ತಾನೆ.

## ೨೧. ಮಾಂದಿ ಭವನಾಧಿಪನ ಫಲ

**ಗುಲಿಕಭವನನಾಥೇ ಕೇಂದ್ರಗೇ ವಾ ತ್ರಿಕೋಣೇ ಬಲಿನಿ ನಿಜ ಗ್ರಹಸ್ಥೇ ಸ್ವೋಚ್ಚ ಮಿತ್ರಸ್ಥಿತೇ ವಾ । ರಥಗಜತುರಗಾಣಾಂ ನಾಯಕೋ ಮಾರತುಲ್ಯೋ ಮಹಿತ ಪ್ರಥುಯಶಸ್ಯಾನ್ಮೇದಿನೀ ಮಂಡಲೇಂದ್ರ: ॥ ಫಲದೀಪಿಕಾ ॥ ೮೩ ॥**

ಗುಳಿಕಸ್ಥಿತ ರಾಶ್ಯಾಧಿಪನು ಬಲಿಷ್ಠನಾಗಿ ಕೇಂದ್ರ, ತ್ರಿಕೋಣಗಳಲ್ಲಿ ಸ್ವಕ್ಷೇತ್ರ, ಉಚ್ಚ ಅಥವಾ ಮಿತ್ರಕ್ಷೇತ್ರಗತನಾದರೆ ಜಾತಕನು ರಥ, ಅಶ್ವ, ಗಜ ಇತ್ಯಾದಿ ವಾಹನಗಳ ಒಡೆಯನು, ಅತ್ಯಂತ ಯಶಸ್ಸನ್ನು ಗಳಿಸುವವನು ಮತ್ತು ರಾಜ ಅಥವಾ ರಾಜತುಲ್ಯನು ಆಗುತ್ತಾನೆ.

**ಮಾಂದಿರಾಶಿಪತಿ ಮಾಂದಿಭಾವಗಾ: ಸ್ವಲ್ಪಬಿಂದು ರಿಪುನೀಚ ಮೂಢಗಾ: । ಪಾಪಖೇಟಯುತ ಭಾವಸಂಧಿಗಾ ರಾಶಿಸಂಧಿ-ಲವಗಾಸ್ತ್ವನಿಷ್ಟದಾ: ॥ ಜಾತಕ ಪಾರಿಜಾತ ॥ ೮೪ ॥**

1. ಮಾಂದಿಭವನಾಧಿಪತಿ, 2. ಮಾಂದಿಸ್ಥಿತ ರಾಶಿಯಲ್ಲಿರುವ ಗ್ರಹ, 3. ಅಷ್ಟಕವರ್ಗದಲ್ಲಿ ಸ್ವಲ್ಪ ಬಿಂದು ಇರುವ ರಾಶಿಯಲ್ಲಿರುವ ಗ್ರಹ, 4. ಶತ್ರು ಕ್ಷೇತ್ರಸ್ಥಿತಗ್ರಹ, 5. ನೀಚಕ್ಷೇತ್ರ ಸ್ಥಿತಗ್ರಹ, 6. ಅಸ್ತಗ್ರಹ, 7. ಪಾಪಗ್ರಹರಿಂದ ಕೂಡಿದ ಗ್ರಹ, 8. ಭಾವಸಂಧಿಸ್ಥಿತ ಗ್ರಹ, ಮತ್ತು 9. ರಾಶಿ ಸಂಧಿಯಲ್ಲಿರುವ ಗ್ರಹನು ಅನಿಷ್ಟ ಫಲಗಳನ್ನು ನೀಡುತ್ತಾನೆ.

**ಮಾಂದಿತ್ರಿಕೋಣೋಪಗತಂ ವಿಲಗ್ನಂ ತದ್ದ್ವಾದಶಾಂಶೇ ಯದಿ ವಾ ನವಾಂಶೇ । ಮಾಂದ್ಯಾನ್ವಿತೋ ಮಾಂದಿಯುತರ್ಕ್ಷನಾಥ: ಸರ್ವೇ ಸದಾಽನಿಷ್ಟಕರಾ ಭವಂತಿ ॥ ಜಾ. ಪಾ ॥ ೮೫ ॥**

1. ಜನ್ಮಲಗ್ನವು ಮಾಂದಿಸ್ಥಿತ ರಾಶಿಯ ತ್ರಿಕೋಣ ರಾಶಿಯಲ್ಲಿ ಇರುತ್ತದೆ. 2. ಮಾಂದಿಸ್ಥಿತ ನವಾಂಶರಾಶಿ ಅಥವಾ ದ್ವಾದಶಾಂಶರಾಶಿಯಲ್ಲಿ ಜನ್ಮಲಗ್ನ ಇರುತ್ತದೆ. 3. ಮಾಂದಿಯ ಯುತಿಯಲ್ಲಿದ್ದ ಗ್ರಹ-ಮತ್ತು ಮಾಂದಿರಾಶ್ಯಾಧಿಪನು ಯಾವಾಗಲೂ ಅಶುಭ ಫಲವನ್ನು ನೀಡುತ್ತಾರೆ.

**ಸೋತ್ಥೇಶನೌ ಮಾಂದಿಯುತೇ ತಥೈವ ವಾತಾದ್ ಭಯಂ ಸೌಮ್ಯ ದೃಶಾ ವಿಹೀನೇ । ತೃತೀಯನಾಥ ಸ್ಥಿತರಾಶಿನಾಥ ಸಂಯುಕ್ತ ರಾಶ್ಯಂಶಪತೌ ಚ ಕೇಂದ್ರೇ ॥ ಚಿಂತಾಮಣಿ ॥ ೮೬ ॥**

ಶನಿಯು ಮಾಂದಿಯ ಯುತಿಯಲ್ಲಿ ತೃತೀಯದಲ್ಲಿರಬೇಕು, ಮತ್ತು ಅದರ ಕೇಂದ್ರದಲ್ಲಿ, ತೃತೀಯಾಧಿಪನು ಸ್ಥಿತರಾಶಿಯನ್ನು ಶೋಧಿಸಿ ಆ ರಾಶ್ಯಾಧಿಪನುಸ್ಥಿತ, ರಾಶ್ಯಾಧಿಪನ ಅಂಶನಾಥನು ಇರಬೇಕು. ಈ ಯೋಗದಲ್ಲಿ ಜಾತಕನಿಗೆ ವಾತರೋಗಭಯ ಇರುತ್ತದೆ.

# ಉಪಗ್ರಹರ ಶೋಧನೆ.

## ೨೨. ಯಮಕಂಟಕ

( ಗುರುವಿನ ಉಪಗ್ರಹ )

''ಗುರುವದ್ಯಮ ಕಂಟಕೇ'' ಉಪಗ್ರಹರಲ್ಲಿ ಗುರುವಿನ ಉಪಗ್ರಹನಾದ ಯಮಕಂಟಕನು ಗುರುವಿನಂತೆ ಶುಭಫಲಗಳನ್ನು ನೀಡುತ್ತಾನೆ. ಯಮಕಂಟಕನ ಉದಯಕಾಲ ಶೋಧನಾಕ್ರಮ.

**ದಿವ್ಯಾಘಟೀ ನಿತ್ಯ ತನು: ಖನೀನಾಂ ಚಂದ್ರೇ ರುರ: ಸ್ಯಾದ್ಯಮ ಕಂಟಕಸ್ಯ ।**

ಯಮಕಂಟಕನ ಉದಯಕಾಲವು ರವಿವಾರದಿಂದ ಪ್ರಾರಂಭಿಸಿ ಸೂರ್ಯೋದಯಾತ್ ಹಗಲಿನಘಟಿ ಮತ್ತು ಸೂರ್ಯಾಸ್ತದಿಂದ ರಾತ್ರೆ ಉದಯಕಾಲಘಟಿಗಳು, ದಿನಮಾನ 30 ಘಟಿಗಳು ಇರುವಾಗ ಇಲ್ಲಿ ಬರೆದ ದಿನಾಂತ್ಯ ಘಟಿಯಲ್ಲಿ ಆಗುತ್ತದೆ.

ಯಮಕಂಟಕನ ಉದಯಕಾಲ ಘಟಿಗಳಲ್ಲಿ

| ವಾರ | ದಿವಾ | ರಾತ್ರಿ |
|---|---|---|
| ರವಿವಾರ | 18 | 2 |
| ಚಂದ್ರವಾರ | 14 | 26 |
| ಕುಜವಾರ | 10 | 22 |
| ಬುಧವಾರ | 6 | 18 |
| ಗುರುವಾರ | 2 | 14 |
| ಶುಕ್ರವಾರ | 26 | 10 |
| ಶನಿವಾರ | 22 | 6 |

ದಿನಮಾನ ಅಥವಾ ರಾತ್ರಿಮಾನದಲ್ಲಿ 30 ಘಟಿಗಿಂತ ವ್ಯತ್ಯಾಸ ಇದ್ದಲ್ಲಿ ಯಮಕಂಟಕನ ಉದಯಕಾಲದಲ್ಲಿ ವೃದ್ಧಿ-ಕ್ಷಯ ಮಾಡಬೇಕು.

**ಶುಭಪ್ರಧಾನೇ ಯಮಕಂಟಕ ಸ್ಯಾತ್ ॥ ಫಲದೀಪಿಕಾ ॥**

ಮುಖ್ಯವಾಗಿ ಯಮಕಂಟಕನು ಶುಭಫಲವನ್ನು ನೀಡುತ್ತಾನೆ.

## ೨೩. ಅರ್ಧ ಪ್ರಹಾರ

(ಬುಧನ ಉಪಗ್ರಹ)

**ಅರ್ಧಪ್ರಹಾರಸ್ಯ ಭಟೋ ನಟೇನ ಸ್ತನೌ ಖನೀ ಚಂದ್ರ ಖರೌ ಜಯಜ್ಞ : ।**

ಅರ್ಧಪ್ರಹಾರನ ಉದಯಕಾಲವು ರವಿವಾರದಿಂದ ಪ್ರಾರಂಭಿಸಿ ಸೂರ್ಯೋದಯಾತ್ ಹಗಲಿನಘಟಿ ಮತ್ತು ಸೂರ್ಯಾಸ್ತದಿಂದ ರಾತ್ರಿ ಉದಯಕಾಲಘಟಿಗಳು ದಿನಮಾನ 30 ಘಟಿಗಳು ಇರುವಾಗ, ಇಲ್ಲಿ ಬರೆದ ದಿನಾಂತ್ಯ ಘಟಿಯಲ್ಲಿ ಆಗುತ್ತದೆ.

ಅರ್ಧಪ್ರಹಾರನ ಉದಯಕಾಲ ಘಟಿಗಳಲ್ಲಿ

| ವಾರ | ದಿವಾ | ರಾತ್ರೆ |
|---|---|---|
| ರವಿವಾರ | 14 | 26 |
| ಚಂದ್ರವಾರ | 10 | 22 |
| ಕುಜವಾರ | 6 | 18 |
| ಬುಧವಾರ | 2 | 14 |
| ಗುರುವಾರ | 26 | 10 |
| ಶುಕ್ರವಾರ | 22 | 6 |
| ಶನಿವಾರ | 18 | 2 |

ದಿನಮಾನ ಅಥವಾ ರಾತ್ರೆಮಾನದಲ್ಲಿ 30 ಘಟಿಗಿಂತ ವ್ಯತ್ಯಾಸ ಇದ್ದಲ್ಲಿ ಅರ್ಧಪ್ರಹಾರನ ಉದಯಕಾಲದಲ್ಲಿ ವೃದ್ಧಿ-ಕ್ಷಯ ಮಾಡಬೇಕು.

''ಅರ್ಧಪ್ರಹಾರೇ ಬುಧವತ್ಫಲವ್'' ಬುಧನ ಉಪಗ್ರಹನಾದ ಅರ್ಧಪ್ರಹಾರನು ಬುಧನಂತೆ ಶುಭಫಲಗಳನ್ನು ನೀಡುತ್ತಾನೆ.

**ಅರ್ಧಪ್ರಹಾರ: ಶುಭದ: ಶುಭಾಂಕಯುಕ್ತೇಽನ್ಯಥಾ ಚೇದಶುಭಂ ವಿದದ್ಯಾತ್ ॥ ॥ ಫಲದೀಪಿಕಾ ॥**

ಅರ್ಧ ಪ್ರಹಾರನು ಅಷ್ಟಕವರ್ಗದಲ್ಲಿ ಹೆಚ್ಚುಬಿಂದುಗಳಿರುವ ರಾಶಿಯಲ್ಲಿದ್ದರೆ ಶುಭಫಲವನ್ನು ನೀಡುತ್ತಾನೆ. ಅನ್ಯಥಾ ಅಶುಭಫಲಗಳನ್ನು ನೀಡುತ್ತಾನೆ.

## ೨೪. ಕಾಲ

(ರವಿಯ ಉಪಗ್ರಹ)

**ಕಾಲಸ್ಯ ಫೇನಂ ತನುರುದ್ರದಿವ್ಯಂ ವಂದ್ಯೋ ನಟಸ್ಯೈರನು ಸೂರ್ಯವಾರಾತ್ । ಏಷಾಂ ಸಮಂ ಮಾಂದಿವದೇವ ತತ್ತನ್ನಾಡ್ಯಾಸ್ಫುಟಂ ಲಗ್ನವದತ್ರ ಸಾಧ್ಯಮ್ ॥ ಫಲದೀಪಿಕಾ ॥ ೮೬ ॥**

ಕಾಲನ ಉದಯಕಾಲವು ರವಿವಾರದಿಂದ ಪ್ರಾರಂಭಿಸಿ ಸೂರ್ಯೋದಯಾತ್ ಹಗಲಿನಘಟಿ ಮತ್ತು ಸೂರ್ಯಸ್ತದಿಂದ ರಾತ್ರಿ ಉದಯಕಾಲ ಘಟಿಗಳು, ದಿನಮಾನ 30 ಘಟಿಗಳು ಇರುವಾಗ ಇಲ್ಲಿ ಬರೆದ ದಿನಾಂತ್ಯ ಘಟಿಯಲ್ಲಿ ಆಗುತ್ತದೆ.

ಕಾಲನ ಉದಯಕಾಲ ಘಟಿಗಳಲ್ಲಿ

| ವಾರ | ದಿವಾ | ರಾತ್ರಿ |
|---|---|---|
| ರವಿವಾರ | 2 | 14 |
| ಚಂದ್ರವಾರ | 26 | 10 |
| ಕುಜವಾರ | 22 | 6 |
| ಬುಧವಾರ | 18 | 2 |
| ಗುರುವಾರ | 14 | 26 |
| ಶುಕ್ರವಾರ | 10 | 22 |
| ಶನಿವಾರ | 6 | 18 |

ದಿನಮಾನ ಅಥವಾ ರಾತ್ರಿಮಾನದಲ್ಲಿ 30 ಘಟಿಗಿಂತ ವ್ಯತ್ಯಾಸ ಇದ್ದಲ್ಲಿ ಕಾಲನ ಉದಯಕಾಲದಲ್ಲಿ ವೃದ್ಧಿ-ಕ್ಷಯ ಮಾಡಬೇಕು.

"ಕಾಲೇತು ರಾಹುವತ್" ರವಿಯ ಉಪಗ್ರಹನಾದ ಕಾಲನು ರಾಹುವಿನಂತೆ ಶುಭಾಶುಭಫಲಗಳನ್ನು ನೀಡುತ್ತಾನೆ.

## ೨೫. ಧೂಮ, ವ್ಯತೀಪಾತ, ಪರಿವೇಷ, ಇಂದ್ರಚಾಪ ಮತ್ತು ಉಪಕೇತು.

**ಫಲದೀಪಿಕಾ ಮತ**

**ಅಪ್ರಕಾಶಾಃ ಸಂಚರಂತಿ ಧೂಮಾದ್ಯಾಃ ಪಂಚಖೇಚರಾಃ ।**
**ಕ್ವಚಿತ್ಕದಾಚಿದ್ ದೃಶ್ಯಂತೇ ಲೋಕೋಪದ್ರವ ಹೇತವೇ ॥ ೮೮ ॥**

ಧೂಮಾದಿ ಐದು ಅಪ್ರಕಾಶಕ ಗ್ರಹರು ಆಕಾಶದಲ್ಲಿ ಸಂಚರಿಸುತ್ತಾ ಇದ್ದಾರೆ. ಯಾವಾಗಲಾದರೂ ಒಮ್ಮೆ ಈ ಅಪ್ರಕಾಶಕ ಗ್ರಹರು ಆಕಾಶದಲ್ಲಿ ಸಂಚರಿಸುವುದು ಕಂಡುಬಂದರೆ ಲೋಕಕ್ಕೆ ಹಾನಿ ಸಂಭವಿಸುತ್ತದೆ.

**ಧೂಮಸ್ತು ಧೂಮಪಟಲ: ಪುಚ್ಛಕ್ಷರ್ಮಿತಿ ಕೇಚನ ।**
**ಉಲ್ಕಾಪಾತೋ ವ್ಯತೀಪಾತ: ಪರಿವೇಷಸ್ತು ದೃಶ್ಯತೇ ॥೮೯॥**

ಧೂಮನು ಹೊಗೆಯ ಮೋಡದಂತೆ ಕಂಡುಬರುತ್ತಾನೆ. ಕೆಲವರು ಬಾಲಉಳ್ಳ ನಕ್ಷತ್ರದಂತೆ ಕಾಣುತ್ತಾನೆ, ಎಂದು ಹೇಳುತ್ತಾರೆ. ವ್ಯತೀಪಾತನು ಉಲ್ಕಾಪಾತದಂತೆ ಕಂಡುಬರುತ್ತಾನೆ. ಪರಿವೇಷನು ಮಂಡಲಾಕೃತಿಯಂತೆ ಕಂಡುಬರುತ್ತಾನೆ.

**ಲೋಕೇ ಪ್ರಸಿದ್ಧಂ ಯದ್‌ದೃಷ್ಟಂ ತದೇವೇಂದ್ರಧನು: ಸ್ಮೃತಮ್ ।**
**ಕೇತುಶ್ಚ ಧೂಮಕೇತು: ಸ್ಯಾಲ್ಲೋಕೋಪದ್ರವಕಾರಕ: ॥೯೦॥**

ಲೋಕದಲ್ಲಿ ಪ್ರಸಿದ್ಧವಾಗಿರುವಂಥದ್ದು, ನೋಡಲ್ಪಡುವಂಥದ್ದು ಆದಕಾಮನಬಿಲ್ಲು, ಇಂದ್ರಧನು ಎಂದು ಕರೆಯಲ್ಪಡುತ್ತದೆ. ಉಪಕೇತುವು ಧೂಮಕೇತು ಆಗಿರುತ್ತಾನೆ. ಹಾಗೂ ಲೋಕಕ್ಕೆ ಬಾಧೆಯನ್ನು ನೀಡುವವನು ಆಗಿರುತ್ತಾನೆ.

**ಧೂಮೋ ವೇದಗೃಹೈಸ್ತ್ರಯೋದಶಭಿರಪ್ಯಂಶೈ: ಸಮೇತೇ ರವೌಸ್ಯಾತ್ತಸ್ಮಿನ್ ವ್ಯತಿಪಾತಕೋ ವಿಗಲಿತೇ ಚಕ್ರಾದಥಾಸ್ಮಿನ್ಚ್ಯುತೇ । ಷಡ್ಭಿರ್ಭೈ: ಪರಿವೇಷ ಇಂದ್ರಧನುರಿತ್ಯಸ್ಮಿಂಶ್ಚ್ಯುತೇ ಮಂಡಲಾದತ್ಯ-ಷ್ಟ್ಯಂಶಯುತೇಽತ್ರ ಕೇತುರಥ ತತ್ರೈಕರ್ಕ್ಷ ಯುಕ್ತೋ ರವಿ: ॥೯೧॥**

**ಧೂಮ:** (ಕುಜನ ಉಪಗ್ರಹ) ತತ್ಕಾಲ ಸೂರ್ಯಸ್ಪುಟಕ್ಕೆ 4 ರಾಶಿ 13 ಭಾಗ ಕೂಡಿಸಿದರೆ ಧೂಮ ಉಪಗ್ರಹಸ್ಪುಟ ಲಭಿಸುತ್ತದೆ.

**ವ್ಯತಿಪಾತ ಸ್ಫುಟ:-** (ರಾಹುವಿನ ಉಪಗ್ರಹ) ದ್ವಾದಶರಾಶಿಯಿಂದ ಧೂಮಸ್ಫುಟವನ್ನು ಕಳೆದರೆ ವ್ಯತಿಪಾತಸ್ಫುಟ ಲಭಿಸುತ್ತದೆ.

**ಪರಿವೇಷಸ್ಫುಟ:-** (ಪರಿಧಿ) (ಚಂದ್ರನ ಉಪಗ್ರಹ) ವ್ಯತಿಪಾತ ಸ್ಫುಟಕ್ಕೆ, 6 ರಾಶಿಗಳನ್ನು ಕೂಡಿಸಿದರೆ ಪರಿವೇಷ ಅಥವಾ ಪರಿಧಿಸ್ಫುಟ ಲಭಿಸುತ್ತದೆ.

**ಇಂದ್ರಚಾಪಸ್ಫುಟ:-** (ಕೋದಂಡ, ಕಾರ್ಮುಖ) (ಶುಕ್ರನ ಉಪಗ್ರಹ) ದ್ವಾದಶರಾಶಿಯಿಂದ ಪರಿವೇಷಸ್ಫುಟವನ್ನು ಕಳೆಯಲಾಗಿ ಇಂದ್ರಚಾಪ ಅಥವಾ ಕೋದಂಡಸ್ಫುಟ ಲಭಿಸುತ್ತದೆ.

**ಉಪಕೇತುಸ್ಫುಟ:-** (ಕೇತುವಿನ ಉಪಗ್ರಹ) ಇಂದ್ರಚಾಪಸ್ಫುಟಕ್ಕೆ 16° 40' ಕೂಡಿಸಲಾಗಿ ಉಪಕೇತುಸ್ಫುಟ ಲಭಿಸುತ್ತದೆ.

ಉಪಕೇತುಸ್ಫುಟಕ್ಕೆ ಒಂದು ರಾಶಿಕೂಡಿಸಲು ತತ್ಕಾಲ ರವಿಸ್ಫುಟ ಲಭಿಸುತ್ತದೆ.

ಉದಾ:- ತತ್ಕಾಲ ರವಿಸ್ಫುಟ 3 ರಾಶಿ 4 ಭಾಗ 4 ಕಲೆ 51 ವಿಕಲೆ

| | | |
|---|---|---|
| **ರವಿಸ್ಫುಟ** | 3- 4°-04'-51" | |
| + | 4-13°-00'- 0" | |
| | 7-17°-04'-51" | **ಧೂಮಸ್ಫುಟ** |

| | | |
|---|---|---|
| **ರಾಶಿ** | 12- 0°- 0'- 0" | |
| **- ಧೂಮಸ್ಫುಟ** | 7-17°-04'-51" | |
| | 4-12°-55'- 9" | **ವ್ಯತಿಪಾತಸ್ಫುಟ** |

**ವ್ಯತಿಪಾತಸ್ಫುಟಕ್ಕೆ 6 ರಾಶಿ ಕೂಡಿಸಿದರೆ=**

| | | |
|---|---|---|
| + | 4-12°-55'- 9" | |
| | 6- 0°- 0'- 0" | |
| | 10-12°-55'- 9" | **ಪರಿವೇಷಸ್ಫುಟ** |

| | | |
|---|---|---|
| ರಾಶಿ | 12- 0°- 0'- 0" | |
| -ಪರಿವೇಷ | 10-12°-55'-9" | |
| | 1-17°-04'-51" | ಇಂದ್ರಚಾಪಸ್ಫುಟ |
| ಇಂದ್ರಚಾಪಸ್ಫುಟ | 1-17°-04'-51" | |
| | 0-17°-00'- 0" | |
| | 2- 4°-04'-51" | ಉಪಕೇತುಸ್ಫುಟ |

ಉಪಕೇತುಸ್ಫುಟಕ್ಕೆ ಒಂದು ರಾಶಿ ಕೂಡಿಸಿದರೆ

= 3-4°-04'-51" ತತ್ಕಾಲಿಕ ರವಿಸ್ಫುಟ

## ೨೬. ಧೂಮಾದಿ ಗ್ರಹಸ್ಥಿತ ರಾಶ್ಯಾಧಿಪನ ದಶಾಫಲ

ಫಲದೀಪಿಕಾ ಮತ:-

**ಆತ್ಮಾದಯೋಽಧಿಪೈರ್ಯುಕ್ತಾ ಧೂಮಾದಿ ಗ್ರಹಸಂಯುತಾ: ।**
**ತೇ ಭಾವಾ ನಾಶತಾಂ ಯಾಂತಿ ವದತೀತಿ ಪರಾಶರ: ॥೯೨॥**

ಲಗ್ನಾದಿ ಭಾವಗಳಲ್ಲಿ ಆಯಾ ಭಾವಾಧಿಪತಿಯೊಂದಿಗೆ ಧೂಮಾದಿ ಗ್ರಹರಿದ್ದರೆ ಆ ಭಾವಫಲವು ನಾಶ ಹೊಂದುತ್ತದೆಂದು ಪರಾಶರ ಮುನಿಗಳು ಹೇಳಿರುತ್ತಾರೆ.

**ಧೂಮೇ ಸಂತತಮುಷ್ಣಂ ಸ್ಯಾದಗ್ನಿಭೀತಿರ್ಮನೋವ್ಯಥಾ।**
**ವ್ಯತೀಪಾತೇ ಮೃಗಭಯಂ ಚತುಷ್ಪಾನ್ಮರಣಂತು ವಾ ॥೯೩॥**

ಉಪಗ್ರಹನಾದ ಧೂಮಸ್ಥಿತ ರಾಶ್ಯಾಧಿಪನ ದಶಾಕಾಲದಲ್ಲಿ ಯಾವಾಗಲೂ ಉಷ್ಣ ಮತ್ತು ಅಗ್ನಿಯಿಂದ ಭೀತಿ ಮತ್ತು ಮಾನಸಿಕ ವ್ಯಥೆ ಉಂಟಾಗುತ್ತದೆ.

ವ್ಯತೀಪಾತನುಸ್ಥಿತ ರಾಶ್ಯಾಧಿಪನ ದಶಾಕಾಲದಲ್ಲಿ ಮೃಗಗಳಿಂದ ಭಯ ಉಂಟಾಗುತ್ತದೆ, ಅಥವಾ ಚತುಷ್ಪಾದ ಪ್ರಾಣಿಗಳಿಂದ ಮರಣ ಸಂಭವಿಸುತ್ತದೆ.

**ಪರಿವೇಷೇ ಜಲೇ ಭೀರುರ್ಜಲ ರೋಗಶ್ಚ ಬಂಧನಮ್ ।**
**ಇಂದ್ರಚಾಪೇ ಶಿಲಾಘಾತಃ ಕ್ಷತಂ ಶಸ್ತ್ರೈರಪಿ ಚ್ಯುತಿಃ ॥೯೪॥**

ಪರಿವೇಷಸ್ಥಿತ ರಾಶ್ಯಾಧಿಪನ ದಶಾಕಾಲದಲ್ಲಿ ಜಲಭೀತಿ, ಜಲರೋಗಗಳು ಮತ್ತು ಬಂಧನಸಂಭವಿಸುತ್ತದೆ.

ಇಂದ್ರಚಾಪಸ್ಥಿತ ರಾಶ್ಯಾಧಿಪನ ದಶಾಕಾಲದಲ್ಲಿ ಕಲ್ಲಿನಿಂದ ಹೊಡೆತ, ಶಸ್ತ್ರಗಳಿಂದ ಘಾಯ ಅಥವಾ ಪತನ ಸಂಭವಿಸುತ್ತದೆ.

**ಕೇತೌ ಪತನಘಾತಾದ್ಯಂ ಕಾರ್ಯನಾಶೋಶನೇರ್ಭಯಮ್ ।**
**ಏತೇ ಯದ್ಭಾವಸಹಿತಾಸ್ತದ್ದಶಾಯಾಂ ಫಲಂ ವದೇತ್ ॥೯೫॥**

ಉಪಕೇತುಸ್ಥಿತ ರಾಶ್ಯಾಧಿಪನ ದಶಾಕಾಲದಲ್ಲಿ ಪತನ, ಅಪಘಾತ, ಕೈಕೊಂಡ ಕಾರ್ಯಗಳಲ್ಲಿ ಹಾನಿ ಮತ್ತು ಸಿಡಿಲಿನ ಭಯ ಇತ್ಯಾದಿಯಿಂದ ಪೀಡಿಸಲ್ಪಡುತ್ತಾರೆ.

ಮೇಲಿನ ಫಲಗಳು ಉಪಗ್ರಹಸ್ಥಿತ ರಾಶ್ಯಾಧಿಪನ ದಶಾಕಾಲದಲ್ಲಿ ಸಂಭವಿಸುತ್ತದೆ.

## ೨೭. ಧೂಮಾದಿ ಐದು ಉಪಗ್ರಹರ ಭಾವಫಲಗಳು

**ಪ್ರಶ್ನಮಾರ್ಗ ಮತ:-**

**ಕೂಪೇ ಸ್ಯಾತ್ಪತನಂ ತನೌ ಯದಿ ವಚಸ್ಖಾಲಿತ್ಯಮರ್ಥೇಸ್ಥಿತಃ ಪಂಗುರ್ಭ್ರಾತರಿ ಸೋದರಃ ಸುರಗೃಹಂ ರಕ್ಷೇತ್ಸುಖೇ ಮಾತುಲಃ ।**

**ಕ್ರುದ್ಧಃ ಪಂಚಮಭೇರಿಭೇ ಖಲು ಭವೇದ್ವ್ಯಾಘ್ರೇಣ ದಷ್ಟೋ ಮುಖೇ ಯಾತಿ ಭ್ರಷ್ಟತಯಾ ಮದೇ ತು ನಿಧನೇ ಧೂಮಃ ಕ್ಷತಃ ಶಸ್ತ್ರತಃ ॥೯೬॥**

**ಧರ್ಮೇ ಸ್ವಲ್ಪತಪಾಃ ಖಭೇಶನಿಹತಿರ್ಲಾಭೇ ಲಭೇತೇತರದ್ವ್ಯೇಶ್ಯಾಪಿ ಪ್ರವಸೇದ್ವ್ಯಯೇಥ ತನುಗಃ ಸ್ಯಾಚ್ಛೇದ್ವ್ಯತೀಪಾತಕಃ । ಶ್ವಿತ್ರೀ ವಾಚಿ ಸಕೌಶಲಃ ಸಹಜಭೇಗಾನೀ ಸುಖೇಽಶ್ವಾಗಮೋ ದುಃಖಂ ಪುತ್ರಭವಂ ಸುತೇಽರಿಭವನೇ ಛಿದ್ರಾವಹೋಸ್ತೇಽಧನಃ ॥೯೭॥**

ವೇತ್ತಾ ಸರ್ವಕಲಾ ವ್ಯತೌ ತಪಸಿ ಭಾಗ್ಯೋನೌ ನಭಸ್ಯಗ್ನಿಭೀರ್ಲಾಭೇ ಭೂಪತಿಸತ್ಕೃತೋ ವ್ಯಯಗೃಹೇ ಬ್ರಷ್ಟೋಥ ಸರ್ಪಾನ್ಮೃತಿಃ । ಲಗ್ನಸ್ಥೇ ಪರಿವೇಷನಾಮ್ನಿ ನಿಧಿಕೃತ್ಸ್ಥೇ ಭ್ರಾಂತಿಮಾನ್ ಸೋದರೇ ವಾಸೋ ನಾತ್ಮಗೃಹೇ ಸುಖೇ ಮನಸಿಬದ್ಧೋಂತಸ್ಥ ಚೋರೋ ರಿಪೌ ॥ ೯೮ ॥

ಕಾಮೋಸ್ತೇಕ್ಷತಿರಾಯುಧೇನ ನಿಧನೇ ಗುರ್ವಾದ್ಯಭಕ್ತೋ ಗುರೌ ಹ್ಯೌದಾರ್ಯಂ ದಶಮೇ ಭವೇತು ಜಳವಾಗ್ದೀರ್ಘಾಮಯೋ ದ್ವಾದಶೇ । ವಾತವ್ಯಾಧ್ಯವಶೀಕೃತಾಖಿಲತನು ರ್ವ್ಯತ್ರಾರಿಚಾಪೋ ದಯೇ ಬಾಧಿರ್ಯಂ ವಚಸಿ ದ್ವಿಜನ್ಮವಧಪೂರ್ವಾಕೃತ್ಯಕೃದ್ವಿಕ್ರಮೇ ॥ ೯೯ ॥

ವೇಶ್ಮಸ್ಥೇ ಗಣರಕ್ಷಹಾ ಮನಸಿ ವಾಗ್ಮೀ ಮಂತ್ರವಾದಾವುಭೌ ಷಷ್ಠೇ ಶತ್ರುಭಯಂ ಮದೇಂಗವಿಕಲೋ ಭಾರ್ಯಾನುಭೂತಿಶ್ಚ ನೋ । ಬದ್ಧೋ ಭೂರಿತರಾಶಯಾ ಪ್ರಕಟಯನ್ ಜಾಳ್ಯಂ ಚರೇ-ದಷ್ಟಮೇ ಬಂಧಾದ್ವ್ಯಾತ್ಮಜತೋ ಮೃತಿಸ್ತಪಸಿ ಖೇ ಸ್ವಲ್ಪಾಂಬರಃ ಶೀಘ್ರುಭುಕ್ ॥ ೧೦೦ ॥

ಲಾಭೇ ಭೂರಿಪರಾಕ್ರಮಶ್ಚ ಮೃಗಯಾಸಕ್ತೋ ವ್ಯಯೇ ಪ್ರೋಷಣಮ್ ಕೋಪಾದ್ಭೂಮಿಪತೇರಥೋ ದಯಗತೇ ಕೇತೌ ವಿಕೇಶೋಗ್ರತಃ । ದೌರ್ಬಲ್ಯಂ ಗಿರಿಸಾನುನಾಸಿಕವಚಾ ವಾಗ್ಭೀಶ್ಚ ಸೋತ್ಥೇದ್ವ್ಯಯಮ್ ವೇಶ್ಮಸ್ಥೇ ಸುರಭಿಃ ಸದಾ ಹೃದಿ ನರಃ ಶೂಲೀ ವಧೂರ್ಯುಗ್ಮಸೂಃ ॥ ೧೦೧ ॥

ಅಂಧೋ ರುದ್ಧಮರುನ್ಮ್ರಿಯೇತ ಪರಗೇಹೇರೌ ಮದೇ ಮೋಷಣಾದ್ರಂಧ್ರಸ್ಥೇ ವಿಷಭೋಜನಾತ್ತಪಸಿ ವಿಕ್ರಾಂತಶ್ಚ ದುರ್ಮೃತ್ಯುಭಾಕ್ । ವೃಕ್ಷೇಣಾಭಿಹತೋ ನಿಪತ್ಯ ತರುತೋ ವಾ ಖೇ ಮೃತಿಂ ಪ್ರಾಪ್ನುಯಾದಾಯೇ ಶೇವಧೀಬಾಗ್ಯಯೇ ಶಯನಸೌಖ್ಯಾಭಾವದುಃಖವ್ಯಯಾಃ ॥ ಇತಿ ॥ ॥ ೧೦೨ ॥

## ಲಗ್ನಾದಿಭಾವಸ್ಥಿತ ಧೂಮಫಲ :

ಧೂಮನು ಲಗ್ನದಲ್ಲಿ ಇದ್ದರೆ - ಬಾವಿಯಲ್ಲಿ ಬೀಳುತ್ತಾನೆ. ದ್ವಿತೀಯದಲ್ಲಿ - ಮಾತನಾಡುವಾಗ ತಡೆ, ತೃತೀಯ - ಸಹೋದರನು ಕುಂಟನು, ಚತುರ್ಥ - ಅವನ ಸೋದರಮಾವನಿಗೆ ದೇವಸ್ಥಾನದಲ್ಲಿ ನೌಕರಿ ಲಭಿಸುತ್ತದೆ, ಪಂಚಮ - ಕ್ರೋಧ ಉಳ್ಳವನು, ಷಷ್ಠ - ಮುಖ ಹುಲಿಯಿಂದ ಕಚ್ಚಲ್ಪಡುತ್ತದೆ, ಸಪ್ತಮ-ಸ್ಥಾನಭ್ರಷ್ಟ, ಅಷ್ಟಮ - ಆಯುಧದಿಂದ ಘಾಯ, ನವಮ - ಸ್ವಲ್ಪ ತಪಸ್ಸು ಮಾಡುತ್ತಾನೆ, ದಶಮ - ಮಿಂಚು ತಗಲುತ್ತದೆ, ಲಾಭ - ಪರರ ಮನೆ ಲಭಿಸುತ್ತದೆ, ದ್ವಾದಶ - ಸಂಚಾರ. ಈ ಫಲಗಳು ಧೂಮನು ಲಗ್ನಾದಿ ದ್ವಾದಶಭಾವಗಳಲ್ಲಿ ಇರುವಾಗ ಸಂಭವಿಸುತ್ತದೆ.

## ಲಗ್ನಾದಿ ಭಾವಸ್ಥಿತ ವ್ಯತೀಪಾತಫಲ:-

ವ್ಯತೀಪಾತನು ಲಗ್ನದಲ್ಲಿ ಇದ್ದರೆ-ಚರ್ಮರೋಗ, ದ್ವಿತೀಯ-ವಾಕ್ ಚಾತುರ್ಯ, ತೃತೀಯ-ಸಂಗೀತ ಬಲ್ಲವನು, ಚತುರ್ಥ - ಕುದುರೆ ಮೊದಲಾದವುಗಳನ್ನು ಸಾಕುತ್ತಾನೆ, ಪಂಚಮ - ಮಕ್ಕಳಿಂದ ದುಃಖ, ಷಷ್ಠ - ಶತ್ರುಗಳಿಂದ ಮಾಟ ಆಗುತ್ತದೆ, ಸಪ್ತಮ - ಬಡತನ, ಅಷ್ಟಮ - ಕಲಾವಿದ್ಯೆಬಲ್ಲವನು, ನವಮ - ಅದೃಷ್ಟಹೀನ, ದಶಮ-ಬೆಂಕಿಯ ಭಯ, ಲಾಭ-ರಾಜ ಪ್ರೀತಿ, ವ್ಯಯ-ಭ್ರಷ್ಟನು ಆಗುತ್ತಾನೆ. ಈ ಫಲಗಳು ವ್ಯತೀಪಾತನು ಲಗ್ನಾದಿ ದ್ವಾದಶಭಾವಗಳಲ್ಲಿ ಇರುವಾಗ ಸಂಭವಿಸುತ್ತದೆ.

## ಲಗ್ನಾದಿ ಭಾವಸ್ಥಿತ ಪರಿವೇಷ ( ಪರಿಧಿ ) ಫಲ:-

ಪರಿವೇಷನು ಲಗ್ನದಲ್ಲಿ ಇದ್ದರೆ - ಸರ್ಪಕಚ್ಚಿ ಸಾಯುತ್ತಾನೆ, ದ್ವಿತೀಯ-ಧನವನ್ನು ಹೂಳಿಡುತ್ತಾನೆ, ತೃತೀಯ - ಚಂಚಲ ಮನಸ್ಸು, ಚತುರ್ಥ - ಸ್ವಂತಮನೆಯಲ್ಲಿ ವಾಸಿಸುವುದಿಲ್ಲ, ಪಂಚಮ-ಬಂಧನ, ಷಷ್ಠ-ಕಳ್ಳನು, ಸಪ್ತಮ-ಒಕ್ಕಣ್ಣ, ಅಷ್ಟಮ-ಆಯುಧದಿಂದ ಘಾಯ, ನವಮ-ಗುರುಹಿರಿಯರಿಗೆ ಅವಿಧೇಯತನ, ದಶಮ-ಉದಾರವಂತ, ಲಾಭ-ವಾಕ್ ಚಾತುರ್ಯ ಇಲ್ಲ, ವ್ಯಯ-ದೀರ್ಘ ವ್ಯಾಧಿಯಿಂದ ಪೀಡಿತನು ಆಗುತ್ತಾನೆ. ಈ ಫಲಗಳು ಪರಿವೇಷನು ಲಗ್ನಾದಿ ದ್ವಾದಶಭಾವಗಳಲ್ಲಿ ಇರುವಾಗ ಸಂಭವಿಸುತ್ತದೆ.

## ಲಗ್ನಾದಿ ಭಾವಸ್ಥಿತ ಇಂದ್ರಚಾಪ ( ಕೋದಂಡ ) ಫಲ:-

ಇಂದ್ರಚಾಪನು ಲಗ್ನದಲ್ಲಿ ಇದ್ದರೆ-ವಾತರೋಗ, ದ್ವಿತೀಯ-ಕಿವುಡ, ತೃತೀಯ ಬ್ರಾಹ್ಮಣವಧೆ, ಚತುರ್ಥ-ಗುಂಪಿನ ರಕ್ಷಣೆಯನ್ನು ಮುರಿಯುತ್ತಾನೆ, ಪಂಚಮ-ಮಾತಿನಲ್ಲಿ ಹೆದರುವವನು, ಷಷ್ಠ-ಶತ್ರುಭಯ, ಸಪ್ತಮ-ಅಂಗಹೀನ ಮತ್ತು ದಾಂಪತ್ಯಸುಖ ಇಲ್ಲದವನು, ಅಷ್ಟಮ-ಮಾನಸಿಕ ಇಚ್ಛೆ ಮತ್ತು ಭ್ರಾಂತಿ, ನವಮ-ಬಂಧನದಲ್ಲಿ ಅಥವಾ ಮಕ್ಕಳಿಂದ ಮರಣ ಆಗುತ್ತದೆ, ದಶಮ-ಗಿಡ್ಡ ಬಟ್ಟೆ ಮತ್ತು ಶೀಘ್ರ - ಉಣ್ಣುವವನು, ಲಾಭ-ಅತ್ಯಂತ ಪರಾಕ್ರಮ ಮತ್ತು ಬೇಟೆಯಲ್ಲಿ ಆಸಕ್ತಿ, ವ್ಯಯ-ರಾಜ ಕೋಪದಿಂದ ಸಂಚಾರ ಸಂಭವಿಸುತ್ತದೆ. ಈ ಫಲಗಳು ಇಂದ್ರಚಾಪನು ಲಗ್ನಾದಿ ದ್ವಾದಶ ಭಾವಗಳಲ್ಲಿ ಇರುವಾಗ ಸಂಭವಿಸುತ್ತದೆ.

## ಲಗ್ನಾದಿ ಭಾವಸ್ಥಿತ ಉಪಕೇತುಫಲ:-

ಉಪಕೇತುವು ಲಗ್ನದಲ್ಲಿ ಇದ್ದರೆ-ಖಲ್ವಾಟ, ದ್ವಿತೀಯ-ದುರ್ಬಲತೆ ತೃತೀಯ-ಮೂಗಿನಿಂದ ಮಾತಾಡುವವ ಮತ್ತು ಮಾತಾಡುವಾಗ ಹೆದರಿಕೆ, ಚತುರ್ಥ-ಪರಿಮಳ, ಪಂಚಮ-ಹೃದಯವೇದನೆ, ಹೆಣ್ಣಾದರೆ ಅವುಳಿ-ಜವುಳಿ ಮಕ್ಕಳು ಹೆರುತ್ತಾಳೆ, ಷಷ್ಠ-ಅಂಧನು, ಶ್ವಾಸದಿಂದ ಪರಗೃಹದಲ್ಲಿ ಮರಣ, ಸಪ್ತಮ-ಕಳ್ಳತನದಿಂದ ಮರಣ, ಅಷ್ಟಮ-ವಿಷದಿಂದ ಮರಣ, ನವಮ-ಪರಾಕ್ರಮಿಯಾಗಿ ದುರ್ಮರಣ ಹೊಂದುತ್ತಾನೆ, ದಶಮ-ಮರದಿಂದ ಬಿದ್ದು ಅಥವಾ ಮರ ಬಿದ್ದು ಮರಣ, ಲಾಭ-ನಿಧಿಪ್ರಾಪ್ತಿ, ವ್ಯಯ-ಶಯನ ಸಾಧನಗಳ ಅಭಾವದಿಂದ ದುಃಖ ಮತ್ತು ಖರ್ಚು ಉಂಟಾಗುತ್ತದೆ. ಈ ಫಲಗಳು ಉಪಕೇತುವು ಲಗ್ನಾದಿ ದ್ವಾದಶಭಾವಗಳಲ್ಲಿ ಇರುವಾಗ ಸಂಭವಿಸುತ್ತದೆ.

**ಅಲ್ಪಾಯುಃ ಕುಮುಖಃ ಪರಾಕ್ರಮಗುಣೋ ದುಃಖೀ ಚ ನಷ್ಟಾತ್ಮಜಃ ಪ್ರತ್ಯರ್ಥಿಕ್ಷುಭಿತೋ ವಿಶೀರ್ಣವದನೋ ದುರ್ಮಾರ್ಗ ಮೃತ್ಯುಂ ಗತಃ । ಧರ್ಮಾದಿ ಪ್ರತಿಕೂಲತಾಟನರುಚಿರ್ಲಾಭಾನ್ವಿತೋ ದೋಷವಾನಿತ್ಯೇವಂ ಕ್ರಮಶೋ ವಿಲಗ್ನಭವನಾತ್ಕೇತೋಃ ಫಲಂ ಕೀರ್ತಯೇತ್ ॥ ಫಲದೀಪಿಕಾ ॥೧೦೩॥**

ಉಪಕೇತುವು ಲಗ್ನದಲ್ಲಿದ್ದರೆ - ಅಲ್ಪಾಯು, ದ್ವಿತೀಯ-ಕುರೂಪಿಯಾದ ಮುಖ, ತೃತೀಯ-ಪರಾಕ್ರಮ, ಚತುರ್ಥ-ದುಃಖ, ಪಂಚಮ-ಸಂತಾನನಷ್ಟ, ಷಷ್ಠ-ಪ್ರತಿವಾದಿಯಿಂದ ವ್ಯಾಕುಲಿತನು, ಸಪ್ತಮ-ಇಂಗಿತಕಾಮ, ಅಷ್ಟಮ-ದುರ್ಮಾರ್ಗದಲ್ಲಿ ನಡೆಯುವುದರಿಂದ ಮರಣ, ನವಮ-ಧರ್ಮವಿರುದ್ಧ ಕಾರ್ಯ, ದಶಮ-ತಿರುಗಾಡುವುದರಲ್ಲಿ ಅಭಿರುಚಿ, ಏಕಾದಶ-ಲಾಭ ಮತ್ತು ವ್ಯಯದಲ್ಲಿ ದೋಷಉಳ್ಳವನು ಆಗುತ್ತಾನೆ ಎಂದು ಮಂತ್ರೇಶ್ವರ ಮುನಿಯಮತ ಆಗಿರುತ್ತದೆ.

## ೨೮. ಭಾವಸ್ಥಿತ ಧೂಮಫಲ

**ಪರಾಶರ ಮತ:-**

**ಶೂರೋ ವಿಮಲ ನೇತ್ರಾಂಶ: ಸುಸ್ತಬ್ಧೋ ನಿರ್ಘೃಣ: ಖಲ: ।**
**ಮೂರ್ತಿಸ್ಥೇ ಧೂಮಸಂಜ್ಞೇಚ ಗಾಢರೋಷೋ ನರ: ಸದಾ ॥೧೦೪॥**

ಕುಜನ ಉಪಗ್ರಹನಾದ ಧೂಮನು ಲಗ್ನದಲ್ಲಿ ಇದ್ದಾಗ ಜನಿಸಿದವನು ಶೂರನು, ಶುಭವಾದ ದೃಷ್ಟಿ ಉಳ್ಳವನು, ಸ್ತಬ್ಧನು, ನಿರ್ದಯಿಯು, ದುಷ್ಟನು, ಯಾವಾಗಲೂ ಅತ್ಯಂತ ರೋಷ ಉಳ್ಳವನು ಆಗುತ್ತಾನೆ.

**ರೋಗೀ ಧನೀ ತು ಹೀನಾಂಗೋ ರಾಜ್ಯಾಪಹೃತ ಮಾನಸ: ।**
**ಧೂಮೇ ದ್ವಿತೀಯೇ ಸಂಪ್ರಾಪ್ತೇ ಮಂದಪ್ರಜ್ಞೋ ನಪುಂಸಕ: ॥೧೦೫॥**

ಧೂಮನು ದ್ವಿತೀಯದಲ್ಲಿ ಇದ್ದಾಗ ಜನಿಸಿದವನು ರೋಗಿಯು, ಧನಿಕನು, ಅಂಗಹೀನನು, ರಾಜರಿಂದ ಪೀಡಿಸಲ್ಪಟ್ಟು ವ್ಯಥಿತನು, ಮಂದಬುದ್ಧಿಯವನು, ನಪುಂಸಕನು ಆಗುತ್ತಾನೆ.

**ಮತಿಮಾನ್ ಶೌರ್ಯ ಸಂಪನ್ನ: ಇಷ್ಟಚಿತ್ತ: ಪ್ರಿಯಂವದ: ।**
**ಧೂಮೇ ಸಹಜ ಭಾವಸ್ಥೇ ಧನಾಢ್ಯೋ ಧನವಾನ್ ಭವೇತ್ ॥೧೦೬॥**

ಧೂಮನು ತೃತೀಯದಲ್ಲಿ ಇದ್ದಾಗ ಜನಿಸಿದವನು ಬುದ್ಧಿವಂತನು, ಶೌರ್ಯದಿಂದ ಕೂಡಿದವನು, ಸಂತುಷ್ಟನು, ಪ್ರಿಯವಾದ ಮಾತುಗಳನ್ನು ಆಡುವವನು, ಧನಾಢ್ಯನೂ, ಧನವಂತನು ಆಗುತ್ತಾನೆ.

**ಕಲತ್ರಾಂಗ ಪರಿತ್ಯಕ್ತೋ ನಿತ್ಯಂ ಮನಸಿ ದುಃಖಿತಃ । ಧೂಮೇ ಚತುರ್ಥೇ ಸಂಪ್ರಾಪ್ತೇ ಸರ್ವಶಾಸ್ತ್ರಾ ಚಿಂತಕಃ ॥ ೧೦೭ ॥**

ಧೂಮನು ಚತುರ್ಥದಲ್ಲಿ ಇದ್ದಾಗ ಜನಿಸಿದವನು ಸ್ತ್ರೀಯರಿಂದ ತ್ಯಜಿಸಲ್ಪಟ್ಟು ಸದಾ ಮನೋವ್ಯಥೆಯಿಂದ ಕೂಡಿದವನು ಮತ್ತು ಸಕಲ ಶಾಸ್ತ್ರಾರ್ಥ ಬಲ್ಲವನು ಆಗುತ್ತಾನೆ.

**ಸ್ವಲ್ಪಾಪತ್ಯೋ ಧನೈರ್ಹೀನೋ ಧೂಮೇ ಪಂಚಮಸ್ಥಿತೇ । ಗುರುತಾ ಸರ್ವಭಕ್ಷಂ ಚ ಸುಹೃನ್ಮಂತ್ರ ವಿವರ್ಜಿತಃ ॥ ೧೦೮ ॥**

ಧೂಮನು ಪಂಚಮದಲ್ಲಿ ಇದ್ದಾಗ ಜನಿಸಿದವನು, ಅಲ್ಪಸಂತಾನ ಉಳ್ಳವನು, ಧನವಿಲ್ಲದವನು, ಗೌರವವಂತನು, ಎಲ್ಲಾ ತರದ ಭಕ್ಷ್ಯಗಳನ್ನು ತಿನ್ನುವವನು, ಮಿತ್ರರಿಂದ ತ್ಯಜಿಸಲ್ಪಟ್ಟವನು ಆಗುತ್ತಾನೆ.

**ಬಲವಾನ್ ಶತ್ರುವಧಕೋ ಧೂಮೇ ಚ ರಿಪುಭಾವಗೇ । ಬಹುತೇಜೋಯುತಃ ಖ್ಯಾತಃ ಸದಾರೋಗ ವಿವರ್ಜಿತಃ ॥ ೧೦೯ ॥**

ಧೂಮನು ಪಂಚಮದಲ್ಲಿ ಇದ್ದಾಗ ಜನಿಸಿದವನು ಬಲಿಷ್ಠನು, ಶತ್ರುಗಳನ್ನು ನಾಶಮಾಡುವವನು, ಅತ್ಯಂತ ತೇಜಸ್ವಿಯು, ಖ್ಯಾತವಂತನು, ಸದಾ ನಿರೋಗಿಯು ಆಗುತ್ತಾನೆ.

**ನಿರ್ಧನಃ ಸತತಂ ಕಾಮೀ ಪರದಾರೇಷು ಕೋವಿದಃ । ಧೂಮೇ ಸಪ್ತಮಗೇ ಜಾತೋ ನಿಸ್ತೇಜಾಃ ಸರ್ವದಾ ಭವೇತ್ ॥ ೧೧೦ ॥**

ಧೂಮನು ಸಪ್ತಮದಲ್ಲಿ ಇದ್ದಾಗ ಜನಿಸಿದವನು ನಿರ್ಧನನು, ಯಾವಾಗಲೂ ಕಾಮಾತುರನು, ಪರಸ್ತ್ರೀಯರಲ್ಲಿ ಆಸಕ್ತಿಉಳ್ಳವನು, ತೇಜಸಿಲ್ಲದವನು ಆಗುತ್ತಾನೆ.

**ವಿಕ್ರಮೇಣ ಪರಿತ್ಯಕ್ತಃ ಸೋತ್ಸಾಹೋ ಸತ್ಯಸಙ್ಗರಃ । ಅಪ್ರಿಯೋ ನಿಷ್ಠುರಃ ಸ್ವಾರ್ಥೀ ಧೂಮೇ ಮೃತ್ಯುಗತೇ ಸತಿ ॥ ೧೧೧ ॥**

ಧೂಮನು ಅಷ್ಟಮದಲ್ಲಿ ಇದ್ದಾಗ ಜನಿಸಿದವನು ಪರಾಕ್ರಮವಿಲ್ಲದವನು, ಉತ್ಸಾಹದಿಂದ ಕೂಡಿದವನು, ಸತ್ಯರತನು, ಅಪ್ರಿಯವಾದ ಮಾತುಗಳಿಂದ ನಿಷ್ಠುರ ಮಾಡುವವನು, ಸ್ವಾರ್ಥಿಯು ಆಗುತ್ತಾನೆ.

**ಸುತಸೌಭಾಗ್ಯ ಸಂಪನ್ನೋ ಧನೀ ಮಾನೀ ದಯಾನ್ವಿತ: । ಧರ್ಮ-ಸ್ಥಾನೇ ಸ್ಥಿತೇ ಧೂಮೇ ಧರ್ಮವಾನ್ ಬಂಧುವತ್ಸಲ: ॥೧೧೨॥**

ಧೂಮನು ನವಮದಲ್ಲಿದ್ದಾಗ ಜನಿಸಿದವನು ಪುತ್ರವಂತನು, ಭಾಗ್ಯವಂತನು, ಧನವಂತನು, ಮಾನವಂತನು, ದಯಾವಂತನು, ಧಾರ್ಮಿಕಪ್ರವೃತ್ತಿಉಳ್ಳವನು, ಬಂಧುಗಳಲ್ಲಿ ವಾತ್ಸಲ್ಯ ಉಳ್ಳವನು ಆಗುತ್ತಾನೆ.

**ಸುತಸೌಭಾಗ್ಯ ಸಂಯುಕ್ತ: ಸಂತೋಷೀ ಮತಿಮಾನ್ ಸುಖೀ । ಕರ್ಮಸ್ಥೇ ಮಾನವೋ ನಿತ್ಯಂ ಧೂಮೇ ಸತ್ಯಪರಸ್ಥಿತ: ॥೧೧೩॥**

ಧೂಮನು ದಶಮದಲ್ಲಿ ಇದ್ದಾಗ ಜನಿಸಿದವನು ಪುತ್ರಸೌಭಾಗ್ಯಗಳಿಂದ ಕೂಡಿದವನು, ಸಂತೋಷಚಿತ್ತನು, ಬುದ್ಧಿವಂತನು, ಸುಖವಂತನು, ಸತ್ಯರತನು ಆಗುತ್ತಾನೆ.

**ಧನಧಾನ್ಯ ಹಿರಣ್ಯಾಢ್ಯೋ ರೂಪವಾಂಶ್ಚ ಕಲಾನ್ವಿತ: । ಧೂಮೇ ಲಾಭಗತೇ ಚೈವ ವಿನೀತೋ ಗೀತಕೋವಿದ: ॥೧೧೪॥**

ಧೂಮನು ಲಾಭದಲ್ಲಿ ಇದ್ದಾಗ ಜನಿಸಿದವನು ಧನಕನಕಾದಿಗಳಿಂದ ಕೂಡಿದವನು, ರೂಪವಂತನು, ಕಲಾವಂತನು, ವಿನಯವಂತನು, ಸಂಗೀತದಲ್ಲಿ ಪ್ರವೀಣನು ಆಗುತ್ತಾನೆ.

**ಪತಿತ: ಪಾಪಕರ್ಮಾ ಚ ಧೂಮೇ ದ್ವಾದಶಸಂಗತೇ । ಪರದಾರೇಷು ಸಂಸಕ್ತೋ ವ್ಯಸನೀ ನಿರ್ಘೃಣ: ಶಠ: ॥೧೧೫॥**

ಧೂಮನು ವ್ಯಯದಲ್ಲಿ ಇದ್ದಾಗ ಜನಿಸಿದವನು ಪತಿತನು, ಪಾಪಕರ್ಮಗಳಲ್ಲಿ ಆಸಕ್ತಿ ಉಳ್ಳವನು, ಪರಸ್ತ್ರೀಯರಲ್ಲಿ ಆಸಕ್ತನು, ವ್ಯಸನದಿಂದ ಪೀಡಿತನು, ನಿರ್ದಯಿಯು, ಶಠಮತಿಯು ಆಗುತ್ತಾನೆ.

ಧೂಮನುಸ್ಥಿತ ರಾಶ್ಯಾಧಿಪತಿಯು, ನಿರ್ಬಲನಾದಾಗ, ಪಾಪದೃಷ್ಟ ಅಥವಾ ಯುತನಾದಾಗ ಅಶುಭಫಲಗಳು ಲಭಿಸುತ್ತವೆ. ಈ ರಾಶ್ಯಾಧಿಪತಿಯು ಬಲಿಷ್ಠನಾದಾಗ, ಶುಭದೃಷ್ಟ ಅಥವಾ ಯುತನಾದಾಗ ಶುಭಫಲಗಳು ಲಭಿಸುತ್ತವೆ.

## ೨೯. ಭಾವಸ್ಥಿತ ವ್ಯತೀಪಾತಫಲ

**ಲಗ್ನೇಪಾತೇ ಚ ಸಂಪ್ರಾಪ್ತೇ ಜಾತಕೋ ದುಃಖಪೀಡಿತಃ । ಕ್ರೂರೋ ಘಾತಕರೋ ಮೂರ್ಖೋ ದ್ವೇಷೀ ಬಂಧು ಜನಸ್ಯ ಚ ॥೧೧೬॥**

ವ್ಯತೀಪಾತನು ಲಗ್ನದಲ್ಲಿದ್ದಾಗ ಜನಿಸಿದವನು ದುಃಖದಿಂದ ಪೀಡಿಸಲ್ಪಟ್ಟವನು, ಕ್ರೂರ ಸ್ವಭಾವದವನು, ಘಾತುಕ ಕಾರ್ಯಗಳನ್ನು ಮಾಡುವವನು, ಮೂರ್ಖನು, ಬಂಧುಬಳಗದವರನ್ನು ದ್ವೇಷಿಸುವವನು ಆಗುತ್ತಾನೆ.

**ಜಿಹ್ವೋಪಿತ್ತವಾನ್ ಭೋಗೀ ಧನಸ್ಥೇ ಪಾತಸಂಜ್ಞಕೇ ।**
**ನಿರ್ಘೃಣಶ್ಚಾಽಕೃತಜ್ಞಶ್ಚ ದುಷ್ಟಾತ್ಮಾ ಪಾಪಕೃತ್ತಥಾ ॥೧೧೭॥**

ವ್ಯತೀಪಾತನು ದ್ವಿತೀಯದಲ್ಲಿದ್ದಾಗ ಜನಿಸಿದವನು ನಾಲಗೆ ದೋಷ ಉಳ್ಳವನು, ಪಿತ್ತ ಪ್ರಕೃತಿಯವನು, ಭೋಗವಂತನು, ನಿರ್ಘೃಣನು, ಕೃತಜ್ಞತೆ ಇಲ್ಲದವನು, ದುಷ್ಟನು ಪಾಪಕರ್ಮಗಳನ್ನು ಮಾಡುವವನು ಆಗುತ್ತಾನೆ.

**ಸ್ಥಿರಪ್ರಜ್ಞೋ ರಣೇ ದಾತಾ ಧನಾಢ್ಯೋ ರಾಜವಲ್ಲಭಃ ।**
**ಸಂಪ್ರಾಪ್ತೇ ಸಹಜೇ ಪಾತೇ ಸೇನಾಧೀಶೋ ಭವೇನ್ನರಃ ॥೧೧೮॥**

ವ್ಯತೀಪಾತನು ತೃತೀಯದಲ್ಲಿರುವಾಗ ಜನಿಸಿದವನು ಸ್ಥಿರವಾದ ಬುದ್ಧಿ ಉಳ್ಳವನು, ಸೇನಾಧಿಪತಿಯು, ದಾನಿಯು, ಧನವಂತನು, ರಾಜಪೂಜಿತನು ಆಗುತ್ತಾನೆ.

**ಬಂಧುವ್ಯಾಧಿಸಮಾಯುಕ್ತಃ ಸುತಸೌಭಾಗ್ಯ ವರ್ಜಿತಃ ।**
**ಚತುರ್ಥಗೋ ಯದಾ ಪಾತಸ್ತದಾ ಸ್ಯಾನ್ಮನುಜಸ್ಸಃ ॥೧೧೯॥**

ವ್ಯತೀಪಾತನು ಚತುರ್ಥದಲ್ಲಿದ್ದಾಗ ಜನಿಸಿದವನು ಬಂಧನ, ರೋಗದಿಂದ ಪೀಡಿತನು, ಪುತ್ರ ಸೌಭಾಗ್ಯವಿಲ್ಲದವನು ಆಗುತ್ತಾನೆ.

**ದರಿದ್ರೋ ರೂಪಸಂಯುಕ್ತಃ ಪಾತೇ ಪಂಚಮಗೇ ಸತಿ ।**
**ಕಫಪಿತ್ತಾನಿಲೈರ್ಯುಕ್ತೋ ನಿಷ್ಠುರೋ ನಿರಪತ್ರಪಃ ॥೧೨೦॥**

ವ್ಯತೀಪಾತನು ಪಂಚಮದಲ್ಲಿದ್ದಾಗ ಜನಿಸಿದವನು ದರಿದ್ರನು, ರೂಪವಂತನು, ಕಫ, ಪಿತ್ತಗಳಿಂದ ಪೀಡಿಸಲ್ಪಟ್ಟವನು, ನಿಷ್ಠುರ ಮತ್ತು ನಿರ್ಲಜ್ಜನು ಆಗುತ್ತಾನೆ.

**ಶತ್ರುಹಂತಾ ಸುಪುಷ್ಟಶ್ಚ ಸರ್ವಾಸ್ತ್ರಾಣಾಂ ಚ ಚಾಲಕ: ।**
**ಕಲಾಸು ನಿಪುಣಃ ಶಾಂತ: ಪಾತೇ ಶತ್ರುಗತೇ ಸತಿ ॥ ೧೨೧ ॥**

ವ್ಯತೀಪಾತನು ಷಷ್ಠದಲ್ಲಿದ್ದಾಗ ಜನಿಸಿದವನು ಹೃಷ್ಟಪುಷ್ಟವಾದ ದೇಹಉಳ್ಳವನು, ಶತ್ರುಗಳನ್ನು ನಾಶಮಾಡುವವನು, ಸಕಲ ಶಸ್ತ್ರಗಳನ್ನು ಉಪಯೋಗಿಸಲು ಸಮರ್ಥನು, ಕಲೆಗಳಲ್ಲಿ ನಿಪುಣನು, ಶಾಂತ ಸ್ವಭಾವದವನು ಆಗುತ್ತಾನೆ.

**ಧನದಾರಸುತೈಸ್ತ್ಯಕ್ತ: ಸ್ತ್ರೀಜಿತೋ ದುಃಖಸಂಯುತ:।**
**ಪಾತೇ ಕಲತ್ರಗೇ ಕಾಮೀ ನಿರ್ಲಜ್ಜಃ ಪರಸೌಹೃದಃ ॥ ೧೨೨ ॥**

ವ್ಯತೀಪಾತನು ಸಪ್ತಮದಲ್ಲಿದ್ದಾಗ ಜನಿಸಿದವನು ಧನ ಮತ್ತು ಪತ್ನಿ ಪುತ್ರರಿಂದ ತ್ಯಜಿಸಲ್ಪಟ್ಟವನು, ಸ್ತ್ರೀಯರ ವಶವಾದವನು, ದುಃಖದಿಂದ ಕೂಡಿದವನು, ಕಾಮಿಯು, ನಿರ್ಲಜ್ಜನು, ಮಿತ್ರರಿಗೆ ಸಹಾಯಕನು ಆಗುತ್ತಾನೆ.

**ವಿಕಲಾಕ್ಷೋ ವಿರೂಪಶ್ಚ ದುರ್ಭಗೋ ದ್ವಿಜನಿಂದಕ: ।**
**ಮೃತ್ಯುಸ್ಥಾನೇ ಸ್ಥಿತೇ ಪಾತೇ ರಕ್ತಪೀಡಾ ಪರಿಪ್ಲುತ: ॥ ೧೨೩ ॥**

ವ್ಯತೀಪಾತನು ಅಷ್ಟಮದಲ್ಲಿದ್ದಾಗ ಜನಿಸಿದವನು ಕಣ್ಣುಗಳಲ್ಲಿ ಕಾಂತಿ ಇಲ್ಲದವನು, ರೂಪವಿಲ್ಲದವನು, ದುರ್ಭಾಗ್ಯನು, ಬ್ರಾಹ್ಮಣರನ್ನು ನಿಂದಿಸುವವನು. ರಕ್ತದೋಷದಿಂದ ಪೀಡಿಸಲ್ಪಡುವವನು ಆಗುತ್ತಾನೆ.

**ಬಹುವ್ಯಾಪಾರಕೋ ನಿತ್ಯಂ ಬಹುಮಿತ್ರೋ ಬಹುಶ್ರುತ: ।**
**ಧರ್ಮಭೇ ಪಾತಖೇಟೇ ಚ ಸ್ತ್ರೀಪ್ರಿಯಶ್ಚ ಪ್ರಿಯಂವದ: ॥ ೧೨೪ ॥**

ವ್ಯತೀಪಾತನು ನವಮದಲ್ಲಿದ್ದಾಗ ಜನಿಸಿದವನು ಅನೇಕ ವ್ಯಾಪಾರಗಳನ್ನು ಮಾಡುವವನು, ಅನೇಕ ಮಿತ್ರರುಳ್ಳವನು, ಅನೇಕ ವಿಷಯಗಳನ್ನು ತಿಳಿದವನು, ಧಾರ್ಮಿಕ ಮಾರ್ಗವನ್ನು ಅನುಸರಿಸುವವನು, ಸ್ತ್ರೀಯರಿಗೆ ಪ್ರಿಯನಾದವನು, ಪ್ರಿಯವಾದ ಮಾತುಗಳನ್ನು ಆಡುವವನು ಆಗುತ್ತಾನೆ.

**ಸ-ಶ್ರೀಕೋ ಧರ್ಮಕೃಚ್ಛಾಂತೋ ಧರ್ಮಕಾರ್ಯೇಷು ಕೋವಿದ: ।**
**ಕರ್ಮಸ್ಥೇ ಪಾತಸಂಜ್ಞೇ ಹಿ ಮಹಾಪ್ರಾಜ್ಞೋ ವಿಚಕ್ಷಣಃ ॥ ೧೨೫ ॥**

ವ್ಯತೀಪಾತನು ದಶಮದಲ್ಲಿದ್ದಾಗ ಜನಿಸಿದವನು ಧನ-ಸಂಪತ್ತಿನಿಂದ ಕೂಡಿದವನು, ಧರ್ಮಜ್ಞನು, ಶಾಂತ ಸ್ವಭಾವದವನು, ಧಾರ್ಮಿಕ ಕಾರ್ಯಗಳಲ್ಲಿ ನಿಪುಣನು, ಅತ್ಯಂತ ಮೇಧಾವಿಯು, ವಿಚಕ್ಷಣನು, ಆಗುತ್ತಾನೆ.

**ಪ್ರಭೂತ ದನವಾನ್ ಮಾನೀ ಸತ್ಯವಾದೀ ದೃಢವ್ರತಃ ।**
**ಅಶ್ವಾಡ್ಯೋ ಗೀತಸಂಸಕ್ತ: ಪಾತೇ ಲಾಭಗತೇ ಸತಿ ॥ ೧೨೬ ॥**

ವ್ಯತೀಪಾತನು ಲಾಭದಲ್ಲಿದ್ದಾಗ ಜನಿಸಿದವನು ಧನವಂತನು, ಸತ್ಯವಾದಿಯು, ಸ್ಥಿರವಾದ ಕರ್ಮ ಉಳ್ಳವನು, ಅಶ್ವ ಸಂಪತ್ತು ಉಳ್ಳವನು, ಸಂಗೀತದಲ್ಲಿ ಆಸಕ್ತನು ಆಗುತ್ತಾನೆ.

**ಕೋಪೀ ಚ ಬಹುಕರ್ಮಾಢ್ಯೋ ವ್ಯಂಗೋ ಧರ್ಮಸ್ಯ ದೂಷಕಃ ।**
**ವ್ಯಯಸ್ಥಾನೇ ಗತೇ ಪಾತೇ ವಿದ್ವೇಷೀ ನಿಜ ಬಂಧುಷು ॥ ೧೨೭ ॥**

ವ್ಯತೀಪಾತನು ವ್ಯಯದಲ್ಲಿದ್ದಾಗ ಜನಿಸಿದವನು ಕೋಪಿಷ್ಠನು, ಅನೇಕ ಕಾರ್ಯಗಳಲ್ಲಿ ನಿರತನು, ಅಂಗಹೀನನು, ಧರ್ಮನಿಂದಕನು, ಆತ್ಮೀಯ ಬಂಧುಗಳನ್ನು ದ್ವೇಷಿಸುವವನು ಆಗುತ್ತಾನೆ.

ವ್ಯತೀಪಾತಸ್ಥಿತ ರಾಶ್ಯಾಧಿಪತಿಯು ನಿರ್ಬಲನಾದಾಗ, ಪಾಪದೃಷ್ಟ ಅಥವಾ ಯುತನಾದಾಗ ಅಶುಭಫಲಗಳು ಲಭಿಸುತ್ತವೆ. ರಾಶ್ಯಾಧಿಪತಿಯು ಬಲಿಷ್ಠನಾದಾಗ, ಶುಭದೃಷ್ಟ ಅಥವಾ ಯುತನಾದಾಗ ಶುಭ ಫಲಗಳು ಲಭಿಸುತ್ತವೆ.

## ೩೦. ಭಾವಸ್ಥಿತ ಪರಿಧಿ ( ಪರಿವೇಷ ಫಲ )

**ವಿದ್ವಾನ್ ಸತ್ಯರತಃ ಶಾಂತೋ ಧನವಾನ್ ಪುತ್ರವಾಂಶ್ಶುಚಿಃ ।**
**ಪರಿಧೌ ತನುಗೇ ದಾತಾ ಜಾಯತೇ ಗುರುವತ್ಸಲಃ ॥ ೧೨೮ ॥**

ಪರಿವೇಷನು ಲಗ್ನದಲ್ಲಿದ್ದಾಗ ಜನಿಸಿದವನು, ವಿದ್ಯಾವಂತನು, ಸತ್ಯರತನು, ಶಾಂತ ಸ್ವಭಾವದವನು, ಧನವಂತನು, ಪುತ್ರವಂತನು, ಶುಚಿರ್ಭೂತನು ದಾನಿಯು, ಗುರುಹಿರಿಯರ ಪ್ರೀತಿಪಾತ್ರನು ಆಗುತ್ತಾನೆ.

**ಈಶ್ವರೋ ರೂಪವಾನ್ ಭೋಗೀ ಸುಖೀ ಧರ್ಮಪರಾಯಣಃ ।**
**ಧನಸ್ಥೇ ಪರಿಧೌ ಜಾತಃ ಪ್ರಭುರ್ಭವತಿ ಮಾನವ ॥ ೧೨೯ ॥**

ಪರಿವೇಷನು ದ್ವಿತೀಯದಲ್ಲಿದ್ದಾಗ ಜನಿಸಿದವನು ಐಶ್ವರ್ಯವಂತನು, ರೂಪವಂತನು, ಭೋಗವಂತನು, ಸುಖವಂತನು, ಧರ್ಮಪರಾಯಣನು, ರಾಜತುಲ್ಯನು ಆಗುತ್ತಾನೆ.

**ಸ್ತ್ರೀ ವಲ್ಲಭಃ ಸುರೂಪಾಂಗೋ ದೇವಸ್ವಜನಸಂಗತಃ ।**
**ತೃತೀಯೇ ಪರಿಧೌ ಭೃತ್ಯೋ ಗುರುಭಕ್ತಿ ಸಮನ್ವಿತಃ ॥ ೧೩೦ ॥**

ಪರಿವೇಷನು ತೃತೀಯದಲ್ಲಿದ್ದಾಗ ಜನಿಸದವನು ಸ್ತ್ರೀಯರ ಪ್ರೀತಿಪಾತ್ರನಾದವನು, ಸುಂದರವಾದ ಅಂಗಾಂಗ ಉಳ್ಳವನು, ದೇವರಲ್ಲಿ ಮತ್ತು ಸ್ವಜನರಲ್ಲಿ ಆಸಕ್ತಿ ಉಳ್ಳವನು, ಪರರ ದಾಸ್ಯದಲ್ಲಿರುವವನು, ಗುರುಹಿರಿಯರಲ್ಲಿ ಭಕ್ತಿಯಿಂದ ಕೂಡಿದವನು ಆಗುತ್ತಾನೆ.

**ಪರಿಧೌ ಸುಖಭಾವಸ್ಥೇ ವಿಸ್ಮಿತಂ ತ್ವರಿಮಂಗಲಮ್ । ಅಕ್ರೂರಂ ತ್ವಥ ಸಂಪೂರ್ಣಂ ಕುರುತೇ ಗೀತಕೋವಿದಮ್ ॥ ೧೩೧ ॥**

ಪರಿವೇಷನು ಚತುರ್ಥದಲ್ಲಿದ್ದಾಗ ಜನಿಸಿದವನು ವಿಸ್ಮಯಕರವಾದ ವಾತಾವರಣದಿಂದ ಕೂಡಿದವನು, ಶತ್ರುಗಳಿಗೆ ಮಂಗಲಕರನು, ಕ್ರೂರತ್ವವಿಲ್ಲದವನು, ಸಂಗೀತದಲ್ಲಿ ನಿಪುಣನು ಆಗುತ್ತಾನೆ.

**ಲಕ್ಷ್ಮೀವಾನ್ ಶೀಲವಾನ್ ಕಾಂತ: ಪ್ರಿಯವಾನ್ ಧರ್ಮವತ್ಸಲಃ ।**
**ಪಂಚಮೇ ಪರಿಧೌ ಜಾತ: ಸ್ತ್ರೀಣಾಂ ಭವತಿ ವಲ್ಲಭಃ ॥ ೧೩೨ ॥**

ಪರಿವೇಷನು ಪಂಚಮದಲ್ಲಿದ್ದಾಗ ಜನಿಸಿದವನು ಧನವಂತನು, ಶೀಲವಂತನು, ತೇಜಸ್ವಿಯು, ಪ್ರಿಯವಾದ ಮಾತುಗಳುಳ್ಳವನು. ಧಾರ್ಮಿಕ ಕಾರ್ಯಕಲಾಪಗಳಲ್ಲಿ ಪ್ರೀತಿ ಉಳ್ಳವನು, ಸ್ತ್ರೀಯರಿಂದ ಪ್ರೀತಿಸಲ್ಪಡುವವನು ಆಗುತ್ತಾನೆ.

**ವ್ಯಕ್ತೋಽರ್ಥ ಪುತ್ರವಾನ್ ಭೋಗೀ ಸರ್ವ ಸತ್ವಹಿತೇ ರತಃ ।**
**ಪರಿಧೌ ರಿಪುಭಾವಸ್ಥೇ ಶತ್ರುಹಾ ಜಾಯತೇ ರತಃ ॥ ೧೩೩ ॥**

ಪರಿವೇಷನು ಷಷ್ಠಭಾವದಲ್ಲಿದ್ದರೆ ಪರರಿಗೆ ಮಾರ್ಗದರ್ಶಕನು, ಧನವಂತನು, ಪುತ್ರವಂತನು, ಭೋಗಿಯು, ಸರ್ವ ಜನರಿಗೆ ಹಿತಕಾರಕನು, ಶತ್ರುಗಳನ್ನು ನಾಶಮಾಡುವವನು ಆಗುತ್ತಾನೆ.

**ಸ್ವಲ್ಪಾಪತ್ಯ: ಸುಖೈರ್ಹೀನೋ ಮಂದಪ್ರಜ್ಞಃ ಸುನಿಷ್ಠುರಃ ।**
**ಪರಿಧೌ ದ್ಯೂನಭಾವಸ್ಥೇ ಸ್ತ್ರೀಣಾಂ ವ್ಯಾಧಿಶ್ಚ ಜಾಯತೇ ॥೧೩೪॥**

ಪರಿವೇಷನು ಸಪ್ತಮದಲ್ಲಿದ್ದಾಗ ಜನಿಸಿದವನು ಅಲ್ಪ ಸಂತಾನ ಉಳ್ಳವನು, ಸುಖಹೀನನು, ಮಂದ ಬುದ್ಧಿಯವನು, ಕಲಹವಂತನು, ಸ್ತ್ರೀರೋಗದಿಂದ ಬಳಲುವವನು ಆಗುತ್ತಾನೆ.

**ಆಧ್ಯಾತ್ಮ ಚಿಂತಕ: ಶಾಂತೋ ದೃಢಕಾಯೋ ದೃಢವ್ರತ: ।**
**ಧರ್ಮವಾಂಶ್ಚ ಸಸತ್ವಶ್ಚ ಪರಿಧೌ ರಂಧ್ರ ಸಂಸ್ಥಿತೇ ॥೧೩೫॥**

ಪರಿವೇಷನು ಅಷ್ಟಮದಲ್ಲಿದ್ದಾಗ ಜನಿಸಿದವನು ಶಾಂತಚಿತ್ತನು, ಆಧ್ಯಾತ್ಮ ಚಿಂತನೆ ಮಾಡುವವನು, ದೃಢಕಾಯನು, ಸ್ಥಿರವಾದ ಮತ ಉಳ್ಳವನು. ಧಾರ್ಮಿಕ ಪ್ರವೃತ್ತಿಯವನು, ಸತ್ವದಿಂದ ಕೂಡಿದವನು ಆಗುತ್ತಾನೆ.

**ಪುತ್ರಾನ್ವಿತಃ ಸುಖೀ ಕಾಂತೋ ಧನಾಢ್ಯೋ ಲೌಲ್ಯವರ್ಜಿತಃ ।**
**ಪರಿಧೌ ಧರ್ಮಗೇ ಮಾನೀ ಸ್ವಲ್ಪ ಸಂತುಷ್ಟ ಮಾನಸಃ ॥೧೩೬॥**

ಪರಿವೇಷನು ನವಮದಲ್ಲಿದ್ದಾಗ ಜನಿಸಿದವನು ಪುತ್ರರಿಂದ ಕೂಡಿದವನು, ಸುಖವಂತನು, ತೇಜಸ್ವಿಯು, ಧನವಂತನು, ಚಂಚಲ ವಿಚಾರಗಳಿಲ್ಲದವನು, ಮಾನವಂತನು, ಸ್ವಲ್ಪ ಪ್ರಾಪ್ತಿಯಲ್ಲಿಯೇ ತೃಪ್ತಿಹೊಂದುವವನು ಆಗುತ್ತಾನೆ.

**ಕಲಾಭಿಜ್ಞಸ್ತಥಾ ಭೋಗೀ ದೃಢಕಾಯೋ ಹ್ಯಮತ್ಸರಃ ।**
**ಪರಿಧೌ ದಶಮೇ ಪ್ರಾಪ್ತೇ ಸರ್ವಶಾಸ್ತ್ರಾರ್ಥ ಪಾರಗಃ ॥೧೩೭॥**

ಪರಿವೇಷನು ದಶಮದಲ್ಲಿದ್ದಾಗ ಜನಿಸಿದವನು ಕಲೆಗಳಲ್ಲಿ ನಿಪುಣನು, ಭೋಗವಂತನು, ದೃಢಕಾಯನು, ಮಾತ್ಸರ್ಯವಿಲ್ಲದವನು, ಸಕಲ ಶಾಸ್ತ್ರಪಾರಂಗತನು ಆಗುತ್ತಾನೆ.

**ಸ್ತ್ರೀಭೋಗೀ ಗುಣವಾಂಶ್ಚೈವ ಮತಿಮಾನ್ ಸಜ್ಜನಪ್ರಿಯ: ।**
**ಲಾಭಗೇ ಪರಿಧೌ ಜಾತೋ ಮಂದಾಗ್ನಿರುಪಪದ್ಯತೇ ॥೧೩೮॥**

ಪರಿವೇಷನು ಲಾಭದಲ್ಲಿದ್ದಾಗ ಜನಿಸಿದವನು ಸ್ತ್ರೀಭೋಗದಿಂದ ಸುಖವಂತನು, ಗುಣವಂತನು, ಬುದ್ಧಿವಂತನು, ಸ್ವಜನರಲ್ಲಿ ಪ್ರೇಮ ಉಳ್ಳವನು, ಮಂದಾಗ್ನಿಯಿಂದ ಪೀಡಿಸಲ್ಪಡುವವನು ಆಗುತ್ತಾನೆ.

**ವ್ಯಯಸ್ಥೇ ಪರಿಧೌ ಜಾತೋ ವ್ಯಯಕೃತ್ ಮಾನವ: ಸದಾ ।**
**ದುಃಖಭಾಗ್ ದುಷ್ಟಬುದ್ಧಿಶ್ಚ ಗುರುನಿಂದಾಪರಾಯಣಃ ॥೧೩೯॥**

ಪರಿವೇಷನು ವ್ಯಯದಲ್ಲಿದ್ದಾಗ ಜನಿಸಿದವನು ಅಧಿಕವ್ಯಯ ಮಾಡುವವನು, ಯಾವಾಗಲೂ ದುಃಖ ಪೀಡಿತನು, ದುಷ್ಟ ಬುದ್ಧಿಯವನು, ಗುರು ಹಿರಿಯರ ನಿಂದಕನು ಆಗುತ್ತಾನೆ.

ಪರಿವೇಷಸ್ಥಿತ ರಾಶ್ಯಾಧಿಪತಿಯು ನಿರ್ಬಲನಾದಾಗ, ಪಾಪದೃಷ್ಟ ಅಥವಾ ಯುತನಾದಾಗ ಅಶುಭ ಫಲಗಳು ಲಭಿಸುತ್ತವೆ. ರಾಶ್ಯಾಧಿಪತಿಯು ಬಲಿಷ್ಠನಾದಾಗ, ಶುಭದೃಷ್ಟ ಅಥವಾ ಯುತನಾದಾಗ ಶುಭಫಲಗಳು ಲಭಿಸುತ್ತವೆ.

## ೩೧. ಇಂದ್ರಚಾಪ ( ಕೋದಂಡ ) ಫಲ

**ದನಧಾನ್ಯ ಹಿರಣ್ಯಾಢ್ಯ: ಕೃತಜ್ಞ: ಸಂಮತ: ಸತಾಮ್ ।**
**ಸರ್ವದೋಷ ಪರಿತ್ಯಕ್ತಶ್ಚಾಪೇ ತನುಗತೇ ನರ: ॥೧೪೦॥**

ಇಂದ್ರಚಾಪ ಅಥವಾ ಕೋದಂಡನು ಲಗ್ನದಲ್ಲಿದ್ದಾಗ ಜನಿಸಿದವನು ಧನ, ಧಾನ್ಯ, ಸುವರ್ಣಗಳಿಂದ ಕೂಡಿದವನು, ಕೃತಜ್ಞನು, ಸಜ್ಜನಪ್ರಿಯನು ಆಗುತ್ತಾನೆ. ಲಗ್ನದ ಕೋದಂಡನು ಸಕಲ ದೋಷಗಳನ್ನು ನಿವಾರಿಸುತ್ತಾನೆ.

**ಪ್ರಿಯಂವದಃ ಪ್ರಗಲ್ಭಾಢ್ಯೋ ವಿನೀತೋ ವಿದ್ಯಯಾಽನ್ವಿತಃ ।**
**ಧನಸ್ಥೇ ಚಾಪಖೇಟೇ ಚ ರೂಪವಾನ್ ಧರ್ಮತತ್ಪರ: ॥೧೪೧॥**

ಕೋದಂಡನು ದ್ವಿತೀಯದಲ್ಲಿದ್ದಾಗ ಜನಿಸಿದವನು ಪ್ರಿಯವಾದ ಮಾತುಗಳನ್ನು ಆಡುವವನು, ಅಗರ್ಭ ಶ್ರೀಮಂತನು, ವಿನಯವಂತನು, ವಿದ್ಯಾವಂತನು, ರೂಪವಂತನು, ಧಾರ್ಮಿಕ ಕಾರ್ಯತತ್ಪರನು ಆಗುತ್ತಾನೆ.

**ಕೃಪಣೋತಿಕಲಾಭಿಜ್ಞ ಚೌರ್ಯಕರ್ಮರತ: ಸದಾ ।**
**ಸಹಜೇ ಧನುಷಿ ಪ್ರಾಪ್ತೇ ಹೀನಾಂಗೋ ಗತಸೌಹೃದಃ ॥೧೪೨॥**

ಕೋದಂಡನು ತೃತೀಯದಲ್ಲಿದ್ದಾಗ ಜನಿಸಿದವನು ಕೃಪಣನು, ಕಲೆಗಳಲ್ಲಿ ಅತ್ಯಂತ ಪರಿಣಿತನು, ಕಳ್ಳತನದಲ್ಲಿ ಮಗ್ನನಾದವನು, ಅಂಗಹೀನನು ಮಿತ್ರರನ್ನು ಕಳಕೊಂಡವನು ಆಗುತ್ತಾನೆ.

**ಸುಖೀ ಗೋಧನದಾನ್ಯಾದ್ಯೈ ರಾಜಸನ್ಮಾನಪೂಜಿತ: ।ಕಾರ್ಮುಕೇ**
**ಸುಖಸಂಸ್ಥೇ ತು ನಿರೋಗೋ ನನು ಜಾಯತೇ ॥ ೧೪೩ ॥**

ಕೋದಂಡನು ಚತುರ್ಥದಲ್ಲಿದ್ದಾಗ ಜನಿಸಿದವನು ಧನ, ಧಾನ್ಯಾದಿ ಗೋಸಂಪತ್ತುಗಳಿಂದ ಕೂಡಿದವನು, ರಾಜಸನ್ಮಾನ ಹೊಂದುವವನು, ರೋಗವಿಲ್ಲದವನು ಆಗುತ್ತಾನೆ.

**ರುಚಿಮಾನ್ ದೀರ್ಘದರ್ಶೀ ಚ ದೇವಭಕ್ತ: ಪ್ರಿಯಂವದ: ।**
**ಚಾಪೇ ಪಂಚಮಗೇ ಜಾತೋ ವಿವೃದ್ಧ: ಸರ್ವಕರ್ಮಸು ॥೧೪೪॥**

ಕೋದಂಡನು ಪಂಚಮದಲ್ಲಿದ್ದಾಗ ಜನಿಸಿದವನು ರೂಪವಂತನು, ದೂರದರ್ಶಿತ್ವ ಉಳ್ಳವನು, ದೇವಭಕ್ತನು, ಪ್ರಿಯವಾದ ಮಾತುಗಳನ್ನು ಆಡುವವನು, ಸಕಲಕರ್ಮಗಳಲ್ಲಿ ಯಶಸ್ಸನ್ನು ಗಳಿಸುವವನು ಆಗುತ್ತಾನೆ.

**ಶತ್ರುಹಂತಾಽತಿಧೂರ್ತಶ್ಚ ಸುಖೀ ಪ್ರೀತಿರುಚಿ: ಶುಚಿ: ।**
**ಷಷ್ಠಸ್ಥಾನಗತೇ ಚಾಪೇ ಸರ್ವಕರ್ಮಸಮೃದ್ಧಿಭಾಕ್ ॥ ೧೪೫ ॥**

ಕೋದಂಡನು ಷಷ್ಠದಲ್ಲಿ ಇದ್ದಾಗ ಜನಿಸಿದವನು ಶತ್ರುಗಳನ್ನು ನಾಶಮಾಡುವವನು, ಅತ್ಯಂತ ಧೂರ್ತನು, ಸುಖವಂತನು, ಪ್ರೀತಿ ಉಳ್ಳವನು, ರುಚಿಕರ ಮತ್ತು ಶುಚಿಕರವಾದ ವಸ್ತುಗಳಲ್ಲಿ ಆಸಕ್ತಿ ಉಳ್ಳವನು, ಸಕಲಕರ್ಮಗಳಲ್ಲಿ ಅಭಿವೃದ್ಧಿ ಹೊಂದುವವನು ಆಗುತ್ತಾನೆ.

**ಈಶ್ವರೋ ಗುಣಸಂಪೂರ್ಣ: ಶಾಸ್ತ್ರವಿದ್ಧಾರ್ಮಿಕ: ಪ್ರಿಯ: ।**
**ಚಾಪೇ ಸಪ್ತಮಭಾವಸ್ಥೇ ಭವತೀತಿ ನ ಸಂಶಯ: ॥ ೧೪೬ ॥**

ಕೋದಂಡನು ಸಪ್ತಮದಲ್ಲಿ ಇದ್ದಾಗ ಜನಿಸಿದವನು ಐಶ್ವರ್ಯವಂತನು, ಸಕಲಗುಣಗಳಿಂದ ಪರಿಪೂರ್ಣನು, ಶಾಸ್ತ್ರಗಳನ್ನು ಬಲ್ಲವನು, ಧರ್ಮಮಾರ್ಗದಲ್ಲಿ ನಡೆಯುವವನು, ಸಕಲರಿಗೂ ಪ್ರಿಯನಾಗಿರುವವನು ಆಗುತ್ತಾನೆ.

**ಪರಕರ್ಮರತ: ಕ್ರೂರ: ಪರದಾರ ಪರಾಯಣ: ।**
**ಅಷ್ಟಮಸ್ಥಾನಗೇ ಚಾಪೇ ಜಾಯತೇ ವಿಕಲಾಂಗಕ: ॥ ೧೪೭ ॥**

ಕೋದಂಡನು ಅಷ್ಟಮದಲ್ಲಿ ಇದ್ದಾಗ ಜನಿಸಿದವನು ಪರಕಾರ್ಯಗಳಲ್ಲಿ ತತ್ಪರನು. ಕ್ರೂರ ಸ್ವಭಾವದವನು, ಪರಸ್ತ್ರಿಯರಲ್ಲಿ ಆಸಕ್ತಿ ಉಳ್ಳವನು, ಅಂಗವೈಕಲ್ಯ ಉಳ್ಳವನು ಆಗುತ್ತಾನೆ.

**ತಪಸ್ವೀ ವ್ರತಚರ್ಯಾಸು ನಿರತೋ ವಿದ್ಯಯಾಽಧಿಕ: ।ಧರ್ಮಷ್ಠೇ
ಜಾಯತೇ ಚಾಪೇ ಮಾನವೋ ಲೋಕವಿಶ್ರುತ: ॥ ೧೪೮ ॥**

ಕೋದಂಡನು ನವಮದಲ್ಲಿ ಇದ್ದಾಗ ಜನಿಸಿದವನು ತಪಸ್ವಿಯು, ವ್ರತ ಕರ್ಮಗಳಲ್ಲಿ ನಿರತನು, ಹೆಚ್ಚು ವಿದ್ಯೆಗಳನ್ನು ತಿಳಿಯಲು ಆಸಕ್ತಿ ಉಳ್ಳವನು ಆಗಿ ಲೋಕದಲ್ಲಿ ಪ್ರಖ್ಯಾತನು ಆಗುತ್ತಾನೆ.

**ಬಹುಪುತ್ರಧನೈಶ್ವರ್ಯೋ ಗೋಮಹಿಷ್ಯಾದಿಮಾನ್ ಭವೇತ್ ।
ಕರ್ಮಭೇ ಚಾಪಸಂಯುಕ್ತೇ ಜಾಯತೇ ಲೋಕವಿಶ್ರುತ: ॥೧೪೯ ॥**

ಕೋದಂಡನು ದಶಮದಲ್ಲಿ ಇದ್ದಾಗ ಜನಿಸಿದವನು ಬಹುಪುತ್ರರು, ಧನ, ಐಶ್ವರ್ಯಗಳಿಂದ ಕೂಡಿದವನು, ಗೋ, ಮಹಿಷ್ಯಾದಿ ಪಶುಸಂಪತ್ತು ಉಳ್ಳವನು ಆಗಿ ಲೋಕದಲ್ಲಿ ಪ್ರಖ್ಯಾತನು ಆಗುತ್ತಾನೆ.

**ಲಾಭಗೇ ಚಾಪಖೇಟೇ ಚ ಲಾಭಯುಕ್ತೋ ಭವೇನ್ನರ: ।
ನಿರೋಗೋ ದೃಢಕೋಪಾಗ್ನಿರ್ಮಂತ್ರಸ್ತ್ರಿ ಪರಮಾಸ್ತ್ರವಿತ್ ॥೧೫೦ ॥**

ಕೋದಂಡನು ಲಾಭದಲ್ಲಿ ಇದ್ದಾಗ ಜನಿಸಿದವನು ಲಾಭವನ್ನು ಗಳಿಸುವವನು, ರೋಗವಿಲ್ಲದವನು, ಅತ್ಯಂತ ಕೋಪಉಳ್ಳವನು, ಮಂತ್ರಗಳನ್ನು ಬಲ್ಲವನು, ಸ್ತ್ರೀಯರಿಗೆ ಪ್ರಿಯನು, ಅಸ್ತ್ರಗಳನ್ನು ಉಪಯೋಗಿಸಲು ಸಮರ್ಥನು ಆಗುತ್ತಾನೆ.

**ಖಲೋಽತಿಮಾನೀ ದುರ್ಬುದ್ಧಿರ್ನಿರ್ಲಜ್ಜೋ ವ್ಯಯಸಂಸ್ಥಿತೇ ।
ಚಾಪೇ ಪರಸ್ತ್ರೀಸಂಯುಕ್ತೋ ಜಾಯತೇ ನಿರ್ಧನ: ಸದಾ ॥೧೫೧ ॥**

ಕೋದಂಡನು ವ್ಯಯದಲ್ಲಿ ಇದ್ದಾಗ ಜನಿಸಿದವನು ದುಷ್ಟನು, ಅತೀ ಮಾನವಂತನು, ದುರ್ಬುದ್ಧಿಯಿಂದ ಕೂಡಿದವನು, ನಿರ್ಲಜ್ಜನು, ಪರಸ್ತ್ರೀಯರಲ್ಲಿ ಆಸಕ್ತಿಉಳ್ಳವನು, ನಿರ್ಧನನು ಆಗುತ್ತಾನೆ.

ಕೋದಂಡಸ್ಥಿತ ರಾಶ್ಯಾಧಿಪನು ನಿರ್ಬಲನಾದಾಗ, ಪಾಪದೃಷ್ಟ ಅಥವಾ ಯುತನಾದಾಗ ಅಶುಭಫಲಗಳು ಲಭಿಸುತ್ತವೆ. ರಾಶ್ಯಾಧಿಪತಿಯು ಬಲಿಷ್ಠನಾದಾಗ ಶುಭದೃಷ್ಟ ಅಥವಾ ಯುತನಾದಾಗ ಶುಭಫಲಗಳು ಲಭಿಸುತ್ತವೆ.

## ೩.೨. ಭಾವಸ್ಥಿತ ಉಪಕೇತು ಫಲ

**ಕುಶಲ: ಸರ್ವ ವಿದ್ಯಾಸು ಸುಖೀ ವಾಕ್ ನಿಪುಣ: ಪ್ರಿಯ: ।**
**ತನೌ ಶಿಖಿನಿ ಸಂಜಾತ: ಸರ್ವಕಾಮಾನ್ವಿತೋ ಭವೇತ್ ॥೧೫೨॥**

ಉಪಕೇತುವು ಲಗ್ನದಲ್ಲಿ ಇದ್ದಾಗ ಜನಿಸಿದವನು. ಸಕಲವಿದ್ಯೆಗಳಲ್ಲಿ ಕುಶಲನು, ಸುಖವಂತನು, ವಾಕ್‌ಚಾತುರ್ಯ ಉಳ್ಳವನು, ಜನಪ್ರಿಯನು, ಸಕಲ ಅಭೀಷ್ಟಗಳನ್ನು ಪಡೆಯುವವನು ಆಗುತ್ತಾನೆ.

**ವಕ್ತಾ ಪ್ರಿಯಂವದ: ಕಾಂತೋ ಧನಸ್ಥಾನಗತೇ ಧ್ವಜೇ ।**
**ಕಾವ್ಯಕೃತ್ ಪಂಡಿತೋ ಮಾನೀ ವಿನೀತೋ ವಾಹನಾನ್ವಿತ: ॥೧೫೩॥**

ಉಪಕೇತುವು ದ್ವಿತೀಯದಲ್ಲಿ ಇದ್ದಾಗ ಜನಿಸಿದವನು, ಪರರಿಗೆ ಮಾರ್ಗದರ್ಶಕನು, ಪ್ರಿಯವಾದ ಮಾತುಗಳು ಉಳ್ಳವನು, ತೇಜಸ್ವಿಯು, ಕಾವ್ಯ ರಚಿಸುವವನು, ಪಂಡಿತನು, ಮಾನವಂತನು, ವಿನಯವಂತನು, ವಾಹನ ಉಳ್ಳವನು ಆಗುತ್ತಾನೆ.

**ಕದರ್ಯ: ಕ್ರೂರಕರ್ತಾ ಚ ಕೃಶಾಂಗೋ ಧನವರ್ಜಿತ: ।**
**ಸಹಜಸ್ಥೇ ತು ಶಿಖಿನಿ ತೀವ್ರರೋಗೀ ಪ್ರಜಾಯತೇ ॥೧೫೪॥**

ಉಪಕೇತುವು ತೃತೀಯದಲ್ಲಿ ಇದ್ದಾಗ ಜನಿಸಿದವನು ಲೋಭಿಯು ಕ್ರೂರ ಕರ್ಮಗಳನ್ನು ಮಾಡುವವನು, ಕೃಶವಾದ ಶರೀರ ಉಳ್ಳವನು, ಧನವಿಲ್ಲದವನು ತೀಕ್ಷ್ಣವಾದ ರೋಗದಿಂದ ಬಳಲುವವನು ಆಗುತ್ತಾನೆ.

**ರೂಪವಾನ್ ಗುಣಸಂಪನ್ನ ಸಾತ್ವಿಕೋಽಪಿ ಶ್ರುತಿಪ್ರಿಯ: ।**
**ಸುಖಸಂಸ್ಥೇ ತು ಶಿಖಿನಿ ಸದಾಭವತಿ ಸೌಖ್ಯಭಾಕ್ ॥೧೫೫॥**

ಉಪಕೇತುವು ಚತುರ್ಥದಲ್ಲಿ ಇದ್ದಾಗ ಜನಿಸಿದವನು ರೂಪವಂತನು, ಗುಣಸಂಪನ್ನನು, ಶ್ರುತಿಗಳಲ್ಲಿ ಅಭಿರುಚಿ ಉಳ್ಳವನು, ಯಾವಾಗಲು ಸುಖವಂತನು ಆಗುತ್ತಾನೆ.

**ಸುಖೀ ಭೋಗೀ ಕಲಾವಿಚ್ಚ ಪಂಚಮ ಸ್ಥಾನಗೇ ಧ್ವಜೇ ।**
**ಯುಕ್ತಿಜ್ಞೋ ಮತಿಮಾನ್ ವಾಗ್ಮೀ ಗುರುಭಕ್ತಿ ಸಮನ್ವಿತ: ॥೧೫೬॥**

ಉಪಕೇತುವು ಪಂಚಮದಲ್ಲಿ ಇದ್ದಾಗ ಜನಿಸಿದವನು ಸುಖವಂತನು, ಭೋಗವಂತನು, ಕಲಾಕೋವಿದನು, ಯುಕ್ತಿವಂತನು, ಬುದ್ಧಿವಂತನು, ವಾಗ್ಮಿಯು, ಗುರುಭಕ್ತಿಯಿಂದ ಕೂಡಿದವನು ಆಗುತ್ತಾನೆ.

**ಮಾತೃಪಕ್ಷಕ್ಷಯಕರ: ಶತ್ರುಹಾ ಬಹುಬಾಂಧವ: । ರಿಪುಸ್ಥಾನೇ ಧ್ವಜೇ ಪ್ರಾಪ್ತೇ ಶೂರ: ಕಾಂತೋ ವಿಚಕ್ಷಣ: ॥ ೧೫೭ ॥**

ಉಪಕೇತುವು ಷಷ್ಠದಲ್ಲಿ ಇದ್ದಾಗ ಜನಿಸಿದವನು, ಮಾತೃಕುಲನಾಶಕನು, ಶತ್ರುಗಳನ್ನು ನಾಶಮಾಡುವವನು, ಅನೇಕ ಬಂಧುಬಾಂಧವರು ಉಳ್ಳವನು, ಶೂರನು, ತೇಜಸ್ವಿಯು, ವಿಚಕ್ಷಣನು ಆಗುತ್ತಾನೆ.

**ದ್ಯೂತಕ್ರೀಡಾಪ್ಸಭಿರತ: ಕಾಮಿ ಭೋಗ ಸಮನ್ವಿತ: । ಧ್ವಜೇ ಸಪ್ತಮಸ್ಥಾನೇ ವೇಶ್ಯಾಸು ಕೃತಸೌಹೃದ: ॥ ೧೫೮ ॥**

ಉಪಕೇತುವು ಸಪ್ತಮದಲ್ಲಿ ಇದ್ದಾಗ ಜನಿಸಿದವನು, ಜೂಜು, ಕ್ರೀಡೆಗಳಲ್ಲಿ ನಿರತನು, ಕಾಮಿಯು, ಭೋಗವಂತನು, ವೇಶ್ಯೆಯರಲ್ಲಿ ಆಸಕ್ತನು ಆಗುತ್ತಾನೆ.

**ನೀಚಕರ್ಮರತ: ಪಾಪೋ ನಿರ್ಲಜ್ಜೋ ನಿಂದಕ: ಸದಾ । ಮೃತ್ಯುಸ್ಥಾನೇ ಧ್ವಜೇ ಪ್ರಾಪ್ತೇ ಗತಸ್ಪೃಪರ ರಕ್ಷಕ: ॥ ೧೫೯ ॥**

ಉಪಕೇತುವು ಸಪ್ತಮದಲ್ಲಿ ಇದ್ದಾಗ ಜನಿಸಿದವನು ನೀಚಕಾರ್ಯಗಳಲ್ಲಿ ನಿರತನು, ಪಾಪಿಯು, ನಿರ್ಲಜ್ಜನು, ಪರರನ್ನು ನಿಂದಿಸುವವನು, ದಾಂಪತ್ಯ ಸುಖವಿಲ್ಲದವನು ಆಗುತ್ತಾನೆ.

**ಲಿಂಗಧಾರೀ ಪ್ರಸನ್ನಾತ್ಮಾ ಸರ್ವಭೂತ ಹಿತೇರತ: । ಧರ್ಮಭೇ ಶಿಖಿನೀ ಪ್ರಾಪ್ತೇ ಧರ್ಮಕಾರ್ಯೇಷು ಕೋವಿದ: ॥ ೧೬೦ ॥**

ಉಪಕೇತುವು ನವಮದಲ್ಲಿದ್ದಾಗ ಜನಿಸಿದವನು ಶಿವಲಿಂಗವನ್ನು ಧರಿಸುವವನು, ಹಸನ್ಮುಖಿಯು, ಸಕಲ ಪ್ರಾಣಿಗಳ ಹಿತದಲ್ಲಿ ಆಸಕ್ತಿ ಉಳ್ಳವನು, ಧಾರ್ಮಿಕ ಕಾರ್ಯಗಳಲ್ಲಿ ನುರಿತವನು ಆಗುತ್ತಾನೆ.

**ಸುಖಸೌಭಾಗ್ಯ ಸಂಪನ್ನ: ಕಾಮಿನೀನಾಂ ಚ ವಲ್ಲಭ: ! ದಾತಾ ದ್ವಿಜೈ: ಸಮಾಯುಕ್ತ: ಕರ್ಮಸ್ಥೇ ಶಿಖಿನಿ ದ್ವಿಜ! ॥ ೧೬೧ ॥**

ಉಪಕೇತುವು ದಶಮದಲ್ಲಿ ಇದ್ದಾಗ ಜನಿಸಿದವನು ಸುಖ ಸೌಭಾಗ್ಯಗಳಿಂದ ಕೂಡಿದವನು, ಸ್ತ್ರೀಯರಿಂದ ಪ್ರೀತಿಸಲ್ಪಡುವವನು, ದಾನಿಯು, ಬ್ರಾಹ್ಮಣರ ಕೂಟದಲ್ಲಿರುವವನು ಆಗುತ್ತಾನೆ.

**ನಿತ್ಯಲಾಭ: ಸುಧರ್ಮೋ ಚ ಲಾಭೇ ಶಿಖಿನಿ ಪೂಜಿತ: ।ಧನಾಢ್ಯ: ಸುಭಗ: ಶೂರ: ಸುಯಜ್ಞಶ್ಚಾತಿ ಕೋವಿದ: ॥೧೬೨॥**

ಉಪಕೇತುವು ಲಾಭದಲ್ಲಿರುವಾಗ ಜನಿಸಿದವನು ದಿನಂಪ್ರತಿ ಲಾಭಗಳಿಸುವವನು, ಉತ್ತಮವಾದ ಧಾರ್ಮಿಕ ಆಚರಣೆ ಉಳ್ಳವನು, ಪೂಜಿಸಲ್ಪಡುವವನು, ಧನಿಕನು ಸೌಭಾಗ್ಯವಂತನು, ಶೂರನು, ಸತ್ಕರ್ಮ ಮಾಡುವವನು ಅತ್ಯಂತ ನಿಪುಣನು ಆಗುತ್ತಾನೆ.

**ಪಾಪಕರ್ಮರತ: ಶೂರ: ಶ್ರದ್ಧಾಹೀನೋಽಘೃಣೋ ನರ: । ಪರದಾರರತೋ ರೌದ್ರ: ಶಿಖಿನಿ ವ್ಯಯಗೇ ಸತಿ ॥೧೬೩॥**

ಉಪಕೇತುವು ವ್ಯಯದಲ್ಲಿರುವಾಗ ಜನಿಸಿದವನು ಪಾಪಕರ್ಮರತನಾದವನು, ಶೂರನು, ಶ್ರದ್ಧೆ ಇಲ್ಲದವನು, ನಿಘೃಣನು, ಪರಸ್ತ್ರೀಯರಲ್ಲಿ ಆಸಕ್ತಿ ಉಳ್ಳವನು, ಕ್ರೂರ ಸ್ವಭಾವದವನು ಆಗುತ್ತಾನೆ.

ಉಪಕೇತುಸ್ಥಿತ ರಾಶ್ಯಾಧಿಪನು ನಿರ್ಬಲನಾದಾಗ, ಪಾಪದೃಷ್ಟ ಅಥವಾ ಯುತನಾದಾಗ ಅಶುಭ ಫಲಗಳು ಲಭಿಸುತ್ತವೆ. ರಾಶ್ಯಾಧಿಪತಿಯು ಬಲಿಷ್ಠನಾದಾಗ, ಶುಭದೃಷ್ಟ ಅಥವಾ ಯುತನಾದಾಗ ಶುಭಫಲಗಳು ಲಭಿಸುತ್ತವೆ.

## ೩೩. ಗುಳಿಕ-ರೋಗಪ್ರಶ್ನೆ

**ಲಗ್ನಾಂಶರಾಶಿಗೇ ಚಂದ್ರೇ ಪ್ರಷ್ಟೂರುಗ್ಗರ್ದ್ವನಂಯದಿ । ಸ್ವಾಂಶರಾಶಿಗತೇ ಮೋಹೋಮೃತಿರ್ಮಾಂದ್ಯಂಶರಾಶಿಗೇ ॥೧೬೪॥**

ರೋಗಪ್ರಶ್ನೆಯಲ್ಲಿ 1. ಚಂದ್ರನು ಲಗ್ನನವಾಂಶ ರಾಶಿಯಲ್ಲಿ ಸಂಚರಿಸುವಾಗ ರೋಗವು ಉಲ್ಬಣಿಸುತ್ತದೆ. 2. ಚಂದ್ರನು ತಾನುಸ್ಥಿತ ನವಾಂಶ ರಾಶಿಯಲ್ಲಿ ಸಂಚರಿಸುವಾಗ ಮೋಹಕಾಲ (ಇಂದ್ರಿಯ ಅಜ್ಞಾನಾವಸ್ಥೆ) ಆಗುತ್ತದೆ. 3. ಚಂದ್ರನು ಮಾಂದಿಸ್ಥಿತ ನವಾಂಶರಾಶಿಯಲ್ಲಿ ಸಂಚರಿಸುವಾಗ ಅವಸಾನ ಕಾಲ ಆಗುತ್ತದೆ.

**ಚಂದ್ರಮಾಂದ್ಯಂಶಕೌಯುಕ್ತೌ ಯದಿತದ್ರಾಶಿಗೇವಿಧೌ ।ಮೋಹ:**
**ಸತ್ಯರ್ಕಮಾಂದ್ಯಂಶ ಯೋಗೇ ತತ್ರಗತೇ ಮೃತಿ: ॥೧೬೫॥**

ರೋಗಪ್ರಶ್ನೆಯಲ್ಲಿ ಚಂದ್ರ ಮತ್ತು ಮಾಂದಿಯ ನವಾಂಶವು ಒಂದೇ ಆದರೆ, 1. ಚಂದ್ರನು ಆ ನವಾಂಶರಾಶಿಯಲ್ಲಿ ಸಂಚರಿಸುವಾಗ ರೋಗಿಗೆ ಮೋಹಕಾಲ ಆಗುತ್ತದೆ, 2. ಸೂರ್ಯನ ಮತ್ತು ಮಾಂದಿಯ ನವಾಂಶವು ಒಂದೇ ಆದರೆ, ಚಂದ್ರನು ಆ ನವಾಂಶರಾಶಿಯಲ್ಲಿ ಸಂಚರಿಸುವಾಗ ರೋಗಿಯ ಅವಸಾನಕಾಲ ಎಂದು ತಿಳಿಯಬೇಕು.

**ತ್ರಿಸ್ಫುಟಸ್ಥೋಡುತೋ ಯಾವತ್ತ್ರಿಕೋಣಮುರಗೋಡುನ: ।**
**ತಾವದ್ವತ್ಸರಮಾಸಾಹರ್ನಾಡಿಕಾಂತೇ ಭವೇನ್ಮೃತಿ: ॥೧೬೬॥**
**ಲಗ್ನೇಶಸ್ಯ ತದಂಶೇಶೇ ಬಂಧುವಿತ್ರಾಹಿತಾಧ್ಯರೌ । ಸ್ವಭಪ್ರತೀ-**
**ಪತೋ ಮಾಂದಿರ್ದಿನರಾತ್ರೌ ಮೃತಿಪ್ರದ: ॥೧೬೭॥ ಪ್ರ. ಮಾ.**

ತಾತ್ಕಾಲಿಕ ಲಗ್ನದ ತ್ರಿಸ್ಫುಟನಕ್ಷತ್ರದಿಂದ ಆಶ್ಲೇಷಾ. ಜ್ಯೇಷ್ಠಾ ಮತ್ತು ರೇವತಿ ಈ ಮೂರು ನಕ್ಷತ್ರಗಳಲ್ಲಿ ಸಮೀಪದ ನಕ್ಷತ್ರದ ಸಂಖ್ಯಾತುಲ್ಯ ವರ್ಷ. ಮಾಸ, ದಿನ, ಗಳಿಗೆಯಲ್ಲಿ ರೋಗಿಯ ಅವಸಾನ ಎಂದು ತಿಳಿಯಬೇಕು. ಪ್ರಶ್ನಲಗ್ನಾಧಿಪತಿ ಮತ್ತು ನವಾಂಶಾಧಿಪನು ಮಿತ್ರನಾದರೆ-ವರ್ಷ, ಸಮನಾದರೆ-ಮಾಸ, ಶತ್ರುವಾದರೆ-ದಿನ, ಅತಿಶತ್ರುವಾದರೆ-ಗಳಿಗೆಕಾಲ ಆಯುರ್ದಾಯ ಎಂದು ತಿಳಿಯಬೇಕು.

ಮಾಂದಿಯು ದಿವಾಬಲ ರಾಶಿಯಲ್ಲಿ ಇದ್ದರೆ (ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಕುಂಭ ಮತ್ತು ಮೀನರಾಶಿ.) ಪ್ರಚ್ಛಕನಿಗೆ ರಾತ್ರಿ ಮರಣ, ಮತ್ತು ಮಾಂದಿಯು ರಾತ್ರಿಬಲ ರಾಶಿಯಲ್ಲಿದ್ದರೆ (ಮೇಷ, ವೃಷಭ, ಮಿಥುನ, ಕರ್ಕಟಕ, ಧನು ಮತ್ತು ಮಕರ ರಾಶಿ,) ದಿವಾಮರಣ ಎಂದು ತಿಳಿಯಬೇಕು.

**ಕ್ರೂರಾಹಿ ಮೃತ್ಯು ಗುಳಿಕಾದಿಷು ಯಾವತಿ ಸ್ಯಾಲ್ಲಗ್ನಾಂಶಕಾತ್ಪ್ರಭೃತಿ ಕಷ್ಟತಮೋ ನವಾಂಶೇ । ತತ್ಕಷ್ಟ ಭಾವವಶತ: ಖಲು ತಾವ-ತೀಷು ವಾಚ್ಯೋ ಗತಾಸು ದಿನಮಾಸಸಮಾಸು ಮೃತ್ಯು: ॥೧೬೮॥**

ಮಾಂದ್ಯಾದಿ (ಮಾಂದಿ, ತ್ರಿಸ್ಫುಟ, ಮೃತ್ಯುಸ್ಫುಟ, ಕೇತು, ರಾಹು, ಶನಿ, ಕುಜ ಅಥವಾ ರವಿ) ಕ್ರೂರಗ್ರಹರಲ್ಲಿ ಅಧಿಕ ಕ್ರೂರನಾದ (ದೋಷಪ್ರದನಾದ),

ಗ್ರಹನುಸ್ಥಿತ ನವಾಂಶವು, ಲಗ್ನನವಾಂಶದಿಂದ ಇರುವ ಅಂತರದಷ್ಟು ದಿನ, ಮಾಸ, ಅಥವಾ ವರ್ಷ ಕಾಲದೊಳಗೆ, ದೋಷಪ್ರದಗ್ರಹನ ಗಹನತೆಯಿಂದ ಪೃಚ್ಛಕನ ಅವಸಾನಕಾಲ ನಿರ್ಣಯ ಮಾಡಬೇಕು.

**ಕಷ್ಟ್ಯೋಽಹಿಮೃತ್ಯುಗುಳಿಕಾದಿಷು ಯತ್ರ ರಾಶೌ ತತ್ಕಾಲಜಂ ನಿಧನದಂ ಯದಿ ವಾ ನಿಮಿತ್ತಮ್ । ತಸ್ಯ ತ್ರಿಕೋಣಜುಷಿ ಕಷ್ಟತಮೇ ತದಾನೀಂ ಚಂದ್ರಾರ್ಕಜೀವರವಿಜೇಷು ಮೃತಿರ್ವಿಚಿಂತ್ಯಾ ॥೧೬೯॥**

ಪ್ರಶ್ನಕಾಲದ ರಾಹು, ಮೃತ್ಯುಸ್ಪುಟ, ಗುಳಿಕಾದಿ, ಅಧಿಕ ದೋಷಪ್ರದನು ಸ್ಥಿತರಾಶಿಯು ಮರಣವನ್ನು ಸೂಚಿಸುವುದಾದರೆ, ಆಕಾಲದ ನಿಮಿತ್ತವು ಕೂಡಾ ಮರಣಪ್ರದವಾದರ, ಗೋಚರದ ಶನಿ, ಗುರು, ರವಿ, ಮತ್ತು ಚಂದ್ರನು ಈ ರಾಶಿಯಲ್ಲಿ ಸಂಚರಿಸುವಾಗ ಮರಣ ಸಂಭವಿಸಬಹುದು.

**ಲಗ್ನಾರೂಢಪಯೋರ್ದ್ವಯೋರ್ಬಲವತಃ ಪ್ರಾರಭ್ಯ ಯಸ್ಮಿನ್ ಗೃಹೇ ನಕ್ಷತ್ರೇಥ ದೃಗಾಣಕೇ ನು ಭವತಿ ಪ್ರಶ್ನೇ ನವಾಂಶೇಪಿ ವಾ । ವೃಕ್ಷಾದೇಃಪತನಾದ್ಯನಿಷ್ಟಮಸುಮತ್ಪ್ರಾಣಪ್ರಣಾಶೋಽಪಿ ವಾ ಸ್ಥಾನಂ ವಾ ಗುಳಿಕಾದಿಕಸ್ಯ ಭವಿತಾ ತಾವದ್ದಿನಾದೌ ಮೃತಿಃ ಇತಿ ॥೧೭೦॥**

ಪ್ರಶ್ನಲಗ್ನಾಧಿಪತಿ ಅಥವಾ ಆರೂಢಲಗ್ನಾಧಿಪತಿ ಇವರಲ್ಲಿ ಬಲಿಷ್ಠನಾದವನು ಸ್ಥಿತರಾಶಿ, ನಕ್ಷತ್ರ, ದ್ರೇಕ್ಕಾಣ, ಅಥವಾ ನವಾಂಶದಿಂದ, ಪೃಚ್ಛಕನ ಮನೆಯಲ್ಲಿ ಸಂಭವಿಸಿದ ಅಶುಭನಿಮಿತ್ತ, ವೃಕ್ಷಾದಿಪತನ, ಪ್ರಾಣಿಯಮರಣ, ಇತ್ಯಾದಿಆದ, ರಾಶಿ, ನಕ್ಷತ್ರ, ದ್ರೇಕ್ಕಾಣ ಅಥವಾ ನವಾಂಶದ ವರೆಗೆ ಗಣಿಸಿ ಅಥವಾ ಅಶುಭರಾದ ಗುಳಿಕಾದಿ ಬಲಿಷ್ಠ ದೋಷಕಾರಕನು ಸ್ಥಿತ, ರಾಶಿ, ನಕ್ಷತ್ರ ದ್ರೇಕ್ಕಾಣ, ನವಾಂಶಾದಿ ವರೆಗೆ ಗಣಿಸಿ (ಇಲ್ಲಿ ರಾಶಿ-12, ನಕ್ಷತ್ರ-27, ದ್ರೇಕ್ಕಾಣ-36, ಮತ್ತು ನವಾಂಶದಿಂದ 108 ಎಂದು, ಈ ಕಾಲದ ವರೆಗ ದಿನ ಅಥವಾ ಮಾಸಾದಿಕಾಲ ಎಂದು ನಿರ್ಣಯಿಸಬೇಕು.) ಅವಸಾನಕಾಲ ಶೋಧಿಸಬೇಕು.

**ರಾಹುಣಾ ಸಂಧಿಸಾದಾದಿ ಮಾಂದಿನೋನ್ಮಾದ ಸಂಭವಃ । ಮೂರ್ಛಾ ದ್ರಾಘೀಯಸೀ ಮಂದೇ ಯಮಕಂಟಕ ವೀಕ್ಷಿತೇ ॥೧೭೧॥**
**ಅರುರರ್ಧ ಪ್ರಹಾರೇಣ ಸಮಾಸನ್ನೇಸುನಿರ್ಗಮೇ । ಕಾಲದೃಷ್ಟೇ ರವೇಃ ಪುತ್ರೇ ನೃಣಾಂ ಸಂಚರತಾಂ ಮೃತಿಃ ॥೧೭೨॥**

ಪ್ರಶ್ನಕಾಲದ ಶನಿಯನ್ನು, 1. ರಾಹುವು ನೋಡಿದರೆ ಸಂಧಿನೋವು. 2. ಮಾಂದಿಯು ನೋಡಿದರೆ ಉನ್ಮಾದ, ಮಾನಸಿಕ ಪೀಡೆ ಸಂಭವನೀಯ, 3. ಯಮಕಂಟಕನು ನೋಡಿದರೆ ಸ್ಮೃತಿ ತಪ್ಪುವುದು, 4. ಅರ್ಧಪ್ರಹಾರನು ನೋಡಿದರೆ ಹುಣ್ಣು, 5. ಕಾಲನು ನೋಡಿದರೆ ಸಂಚಾರಕಾಲದಲ್ಲಿ ಪ್ರಚ್ಛಕನ ಅವಸಾನ ಆಗುತ್ತದೆ.

## ರಾಹು-ಗುಳಿಕ, ಮಾಂದಿಭವನಾಧಿಪನಿಂದ ಮರಣಹೇತು:-

**ತ್ರ್ಯಂಶೇ ಕೋಲಮುಖೇ ಸ್ಥಿತೇ ಮೃಗಗಣೈರ್ಗೃಧ್ರಾನನೇ ಪಕ್ಷಿ-ಭಿಸ್ತತ್ರಾಪ್ಯಸ್ತು ಬಲೋನತಾ ಗುಳಿಕಯೋಗೇಕ್ಷಾದಿಕಂ ಬಾಸ್ಕರೇ: । ನೇಷ್ಟಸ್ಥಾನಗತಾಶ್ಚ ಮಾಂದಿಗೃಹಪಾ: ಸೂರ್ಯಾದಯೋ ದುರ್ಬ-ಲಾಸ್ತಾತಾನ್ಮಾತೃ ಸಹೋತ್ಥ ಬಂಧು ತನಯಸ್ತ್ರೀಭ್ಯ: ಸ್ವತೋಮೃತ್ಯುದಾ: ॥ ೧೭೩ ॥**

1. ಶನಿಯು ಬಲಹೀನನಾಗಿ ಕೋಲಮುಖ ದ್ರೇಕ್ಕಾಣದಲ್ಲಿ ರಾಹು ಅಥವಾ ಗುಳಿಕನಿಂದ ಯುತ ಅಥವಾ ದೃಷ್ಟನಾಗಿದ್ದರೆ ಪ್ರಚ್ಛಕನಿಗೆ ಮೃಗಗಳಿಂದ ಮರಣ ಸಂಭವಿಸುತ್ತದೆ. 2. ಈ ಯೋಗವು ಪಕ್ಷಿದ್ರೇಕ್ಕಾಣದಲ್ಲಿ ಆದರೆ ಪ್ರಚ್ಛಕನಿಗೆ ಪಕ್ಷಿಗಳಿಂದ ಮರಣ ಸಂಭವಿಸುತ್ತದೆ. 3. ಮಾಂದಿ ಭವನಾಧಿಪನು ಬಲಹೀನನಾಗಿ ದುಸ್ಥಾನಗತನಾಗಬೇಕು. ಈ ಗ್ರಹನು ರವಿಯಾದರ ತಂದೆಯಿಂದ ಮರಣ, 4. ಚಂದ್ರನಾದರೆ ತಾಯಿಯಿಂದ, 5. ಕುಜನಾದರೆ ಸಹೋದರನಿಂದ, 6. ಬುಧನಾದರೆ ಸಂಭಂಧಿಕರಿಂದ, 7. ಗುರುವಾದರೆ ಸಂತಾನದಿಂದ, 8. ಶುಕ್ರನಾದರೆ ಹೆಂಡತಿಯಿಂದ, 9. ಶನಿಯಾದರೆ ಸ್ವತಹ: ತನ್ನಿಂದಲೇ ಮರಣ (ಆತ್ಮಹತ್ಯೆ) ಎಂದು ತಿಳಿಯಬೇಕು.

**ಕೋಲಮುಖದ್ರೇಕ್ಕಾಣ:-** ಕರ್ಕಟಕ ಮತ್ತು ಮಕರರಾಶಿಯ ಪ್ರಥಮದ್ರೇಕ್ಕಾಣ ಮತ್ತು ವೃಶ್ಚಿಕರಾಶಿಯ ತೃತೀಯ ದ್ರೇಕ್ಕಾಣ ಕೋಲ (ವರಾಹ) ಮುಖ ದ್ರೇಕ್ಕಾಣ ಎನ್ನುತ್ತಾರೆ.

**ಪಕ್ಷಿದ್ರೇಕ್ಕಾಣ:-** ಸಿಂಹ ಮತ್ತು ಕುಂಭರಾಶಿಯ ಪ್ರಥಮ ದ್ರೇಕ್ಕಾಣ, ಮಿಥುನ ಮತ್ತು ತುಲಾರಾಶಿಯ ದ್ವಿತೀಯ ದ್ರೇಕ್ಕಾಣ ಪಕ್ಷಿ ದ್ರೇಕ್ಕಾಣ ಆಗಿರುತ್ತದೆ.

**ದೌರ್ಬಲ್ಯಾದಿಯುತೇ ಶನೌ ಕ್ಷಿತಿಭುವಾ ಯುಕ್ತೇಕ್ಷಿತೇ ಪಂಚತಾ ಚಾಮುಂಡ್ಯಾದಿನಿಪೀಡಯಾರ ಗುಳಿಕೋಪೇತೇರಿಚಾಣಾದಿಭಿಃ । ಮಂದೇ ಮಾಂದಿವಿವಸ್ವದೀಕ್ಷಿತಯುತೇ ಕೋಪೇನ ಶಂಭೋಸ್ತ – ದೀಯಾವಾಸಾಹಿತಾ ವಾಸಭೂತ ಕೃತಯಾ ಜೂರ್ತ್ಯಾ ಮೃತಿಂ ನಿರ್ದಿಶೇತ್ ॥೧೭೪॥**

1. ಬಲಹೀನಾದಿ ಶನಿಯು ಕುಜಕ್ಷೇತ್ರದಲ್ಲಿದ್ದರೆ, ಅಥವಾ ಕುಜನಿಂದ ದೃಷ್ಟ ಅಥವಾ ಯುತನಾದರೆ ಚಾಮುಂಡ್ಯಾದಿ ಶಕ್ತಿದೇವತೆಗಳ ಕೋಪದಿಂದ ಮರಣ ಸಂಭವಿಸುತ್ತದೆ. 2. ಬಲಹೀನಾದಿ ಶನಿಯು ಕುಜ – ಗುಳಿಕನಿಂದ ದೃಷ್ಟ, ಅಥವಾ ಯುತನಾದರೆ ಶತ್ರುಕೃತ ಅಭಿಚಾರಾದಿಯಿಂದ ಮರಣ. 3. ರವಿ-ಗುಳಿಕನಿಂದ ದೃಷ್ಟ ಅಥವಾ ಯುತನಾದರೆ ಶಿವನ ಕೋಪದಿಂದ (ಹೇತುವಿನಿಂದ), ಶಿವಗಣಗಳಿಂದ ಪೀಡಿಸಲ್ಪಟ್ಟು ಜ್ವರಬಾಧೆಯಿಂದ ಮರಣ ಸಂಭವಿಸಬಹುದು.

## ರೋಗಾರಂಭ ಕಾಲ:– ( ಪ್ರಶ್ನಮಾರ್ಗಮತ )

**ಯದ್ವಾ ವಾಮಾಂದಿನವಾಂಶಸ್ಯ ದ್ವಾದಶಾಂಶರ್ಕ್ಷಗೇ ವಿಧೌ । ಮಾಂದಿಂದುಯೋಗಭೇ ವೈಷು ಗ್ರಾಹ್ಯಂ ಪ್ರಷ್ಟುರನಿಷ್ಟಭಮ್ ॥೧೭೫॥**

ಮಾಂದಿಸ್ಫುಟವನ್ನು 1. ಒಂಭತ್ತರಿಂದ, 2. ಹದಿನೆರಡರಿಂದ ಗುಣಿಸಿ ಬಂದ ಲಬ್ಧತುಲ್ಯ ನಕ್ಷತ್ರದಲ್ಲಿ ಪ್ರಶ್ನಕಾಲದ ಚಂದ್ರನು ಸಂಚರಿಸಿರುವಾಗ, 3. ಮಾಂದಿಸ್ಫುಟ ಮತ್ತು ಚಂದ್ರಸ್ಫುಟವನ್ನು ಕೂಡಿಸಿ ತುಲ್ಯಸ್ಫುಟದಲ್ಲಿ ಚಂದ್ರಚಾರವು ಪ್ರಚ್ಛಕನಿಗೆ ರೋಗಾರಂಭಕಾಲ ಆಗಿರುತ್ತದೆ. 4. ಚಂದ್ರಚಾರದ ಈ ನಕ್ಷತ್ರಗಳಲ್ಲಿ ಪ್ರಚ್ಛಕನ ಜನ್ಮತಾರೆ, ಪ್ರತ್ಯರತಾರೆ, ವಧತಾರೆ ಆಗುವುದು ಅಥವಾ ಚಂದ್ರಾಷ್ಟಮರಾಶಿ ಆದರೆ ಅಲ್ಲಿ ರೋಗಾರಂಭ, ಆಗಿದೆ ಎಂದು ತಿಳಿಯಬೇಕು.

## ರೋಗ ಶಮನ ಕಾಲ:– ( ಪ್ರಶ್ನಮಾರ್ಗಮತ )

**ಮಾಂದಿರಾಶಿಮತಿಕ್ರಾಂತೇ ವೇಂದೌ ಸ್ಯಾಚ್ಛಮನಂ ರುಜಾಮ್ ॥**

ಪ್ರಶ್ನಕಾಲದ ಮಾಂದಿಸ್ಥಿತ ರಾಶಿಯನ್ನು ತಾತ್ಕಾಲಿಕ ಚಂದ್ರನು ದಾಟುವ ಕಾಲ ರೋಗಶಮನ ಆಗುತ್ತದೆ.

# ೩೪. ಜನನಕಾಲದ ಜಾತಕವನ್ನು ತಯಾರಿಸು ಕ್ರಮ

ಜಾತಕ ಪದ್ಧತಿಯಲ್ಲಿ ಸೂರ್ಯೋದಯದಿಂದ ಸೂರ್ಯೋದಯದ ವರೆಗಿನ ಕಾಲವನ್ನು ದಿನ ಎಂದು ಕರೆಯುತ್ತಾರೆ. ಜನನ ಕಾಲದ ಜಾತಕವನ್ನು ತಯಾರಿಸಲು ಜನನ ಸಮಯ, ಜನ್ಮಸ್ಥಳದ ಅಕ್ಷಾಂಶ, ರೇಖಾಂಶಗಳನ್ನು ತಿಳಿಯಬೇಕು. ದೃಕ್ ಸಿದ್ಧಾಂತ ಪಂಚಾಂಗ ಉಪಯೋಗಿಸಬೇಕು.

ಉದಾ:- ಜನನ ತಾ. 20-7-1970 ಚಂದ್ರವಾರ ರಾತ್ರೆ 9 ಘಂಟೆ 40 ಮಿನಿಟು, ಅಕ್ಷಾಂಶ 12 52' ರೇಖಾಂಶ 74 50' ಪೂರ್ವ. ಜನನ ಸ್ಥಳ ಮಂಗಳೂರು.

ಹಿಂದೂ ದಿನವು ಸೂರ್ಯೋದಯದಿಂದ ಪ್ರಾರಂಭವಾಗುವುದರಿಂದ, ಸೂರ್ಯೋದಯದಿಂದ ಜನನ ಕಾಲದ ಅಂತರವನ್ನು ತಿಳಿದು ಅದನ್ನು ಘಟಿ ವಿಘಟಿಗಳನ್ನಾಗಿ ಪರಿವರ್ತಿಸಬೇಕು. ಇದನ್ನು ಜನನ ಘಟಿ ಎಂದು ಕರೆಯುತ್ತಾರೆ.

ಉದಾಹರಣೆಯ ಜನನವು ಜುಲೈ 20ರಂದು ಸ್ಟೇಂಟರ್ಡ್ ಘಂಟೆ 9-40ಕ್ಕೆ ರಾತ್ರೆ ಆಗಿರುತ್ತದೆ. ಆ ದಿನ ಮಂಗಳೂರಿನ ಸೂರ್ಯೋದಯವು ಬೆಳಿಗ್ಗೆ ಸ್ಟೇಂಡರ್ಡ್ ಘಂಟೆ 6 ಮಿನಿಟು 14ಕ್ಕೆ ಆಗಿರುತ್ತದೆ. ಆದ್ದರಿಂದ ಸೂರ್ಯೋದಯದ ನಂತರ ಜನನ ಕಾಲದ ವರೆಗೆ 15 ಘಂಟೆ 26 ಮಿನಿಟು ಸಂದಿರುತ್ತದೆ. ಇದನ್ನು ಘಟಿಗಳನ್ನಾಗಿ ಪರಿವರ್ತಿಸಲು 38 ಘಟಿ 35 ವಿಘಟಿಗಳಾಗುತ್ತವೆ. ಇದು ಸೂರ್ಯೋದಯಾತ್ ಜನನ ಘಟಿ ಆಗುತ್ತದೆ.

| | | | | | |
|---|---|---|---|---|---|
| 1 ದಿನ | = | 60 ಘಟಿ | 1 ಘಟಿ | = | 24 ಮಿನಿಟು |
| 1 ಘಂಟೆ | = | 2 ಘಟಿ | ,, | = | 60 ವಿಘಟಿ |
| | | 30 ವಿಘಟಿ | 1 ವಿಘಟಿ | = | 24 ಸೆಕೆಂಡು |
| 1 ಮಿನಿಟು | = | 2 ವಿಘಟಿ | ,, | = | 6 ಅಸು |
| | | 30 ಲಿಪ್ತಿ | 1 ಅಸು | = | 4 ಸೆಕೆಂಡು |

# ಗ್ರಹಸ್ಫುಟ ಸಾಧನೆ

## ೩೫. ಸೂರ್ಯಸ್ಫುಟ

ಸೂರ್ಯನಿಗೆ ಒಂದು ರಾಶಿಯನ್ನು ದಾಟಲು ಸಾಧಾರಣ 30 ದಿನಗಳು ತಾಗುತ್ತವೆ. ರಾಶಿಚಕ್ರವನ್ನು ದಾಟಲು 365 1/4 ದಿನ ಅಥವಾ ಒಂದು ವರ್ಷ ತಗಲುತ್ತದೆ. ಸೂರ್ಯನ ರಾಶಿ ಪ್ರವೇಶವನ್ನು ಸಂಕ್ರಾಂತಿ ಅಥವಾ ಸಂಕ್ರಮಣವೆಂದು, ರಾಶಿ ಪ್ರವೇಶದಿಂದ ನಿರ್ಗಮನದ ವರೆಗಿನ ಕಾಲವನ್ನು ಸೌರಮಾಸವೆಂದು, ಕರೆಯುತ್ತಾರೆ. ಸೂರ್ಯನು ಪ್ರತೀವರ್ಷ ಸಾಧಾರಣ ಎಪ್ರಿಲ್ 14ರಿಂದ 16ರ ಒಳಗೆ ಮೇಷ ರಾಶಿಯನ್ನು ಪ್ರವೇಶಿಸುತ್ತಾನೆ. ಅವನ ಈ ಪ್ರವೇಶ ಕಾಲವನ್ನು ಮೇಷ ಸಂಕ್ರಾಂತಿ ಎಂದು ಕರೆಯುತ್ತಾರೆ. ಸೂರ್ಯನು ದಿನಕ್ಕೆ ಸಾಧಾರಣ ಒಂದು ಭಾಗದಂತೆ ($1^{\circ}$) ಮುಂದುವರೆದು ಸಾಧಾರಣ 31 ದಿನಗಳಲ್ಲಿ ವೃಷಭ ರಾಶಿಯನ್ನು ಪ್ರವೇಶಿಸುತ್ತಾನೆ. ಸೂರ್ಯನ ಈ ಪ್ರವೇಶ ಕಾಲವನ್ನು ವೃಷಭ ಸಂಕ್ರಾಂತಿ ಎಂದು ಕರೆಯುತ್ತಾರೆ. ಸೂರ್ಯನ ಸಕಲ ರಾಶಿ ಪ್ರವೇಶ ಸಾಮಾನ್ಯ ಕಾಲವನ್ನು ಮುಂದೆ ಬರೆದಿರುತ್ತದೆ.

| | | | | | |
|---|---|---|---|---|---|
| ಮೇಷರಾಶಿ | - | ಎಪ್ರಿಲ್ | 12ರಿಂದ | | 14 |
| ವೃಷಭ | - | ಮೇ | 13 | " | 15 |
| ಮಿಥುನ | - | ಜೂನ್ | 14 | " | 15 |
| ಕರ್ಕಟಕ | - | ಜುಲೈ | 15 | " | 16 |
| ಸಿಂಹ | - | ಆಗೋಸ್ತು | 15 | " | 17 |
| ಕನ್ಯಾ | - | ಸಪ್ಟೆಂಬರ್ | 15 | " | 17 |
| ತುಲಾ | - | ಅಕ್ಟೋಬರ್ | 16 | " | 17 |
| ವೃಶ್ಚಿಕ | - | ನವೆಂಬರ್ | 15 | " | 16 |
| ಧನು | - | ಡಿಸೆಂಬರ್ | 15 | " | 16 |
| ಮಕರ | - | ಜನವರಿ | 13 | " | 14 |
| ಕುಂಭ | - | ಫೆಬ್ರವರಿ | 12 | " | 14 |
| ಮೀನ | - | ಮಾರ್ಚ | 13 | " | 14 |

ಸೂರ್ಯಸ್ಫುಟ ಸಾಧನೆಗೆ ಮೊದಲು ಜನನ ಸೌರಮಾಸದ ದಿನಗಳನ್ನು ಅಂದರೆ ಸೂರ್ಯನು ರಾಶಿ ಪ್ರವೇಶ ಕಾಲದಿಂದ ಪ್ರಾರಂಭಿಸಿ ರಾಶಿ ನಿರ್ಗಮನ ವರೆಗಿನ ಕಾಲವನ್ನು ಕಂಡುಹಿಡಿಯಬೇಕು. ಅನಂತರ ಜನನ ಸೌರಮಾಸದಲ್ಲಿ ಸೂರ್ಯನು ಜನನ ಕಾಲದ ವರೆಗೆ ದಾಟಿದ ದಿನ ಘಟಿ ಇತ್ಯಾದಿ ತಿಳಿಯಬೇಕು. ಇದನ್ನು ಸೂರ್ಯನ ಭುಕ್ತಕಾಲವೆಂದು ಕರೆಯುತ್ತಾರೆ. ರಾಶಿಯಲ್ಲಿ ಸೂರ್ಯನು ದಾಟಲು ಉಳಿದ ಕಾಲವನ್ನು ಭೋಗ್ಯಕಾಲವೆಂದು ಕರೆಯುತ್ತಾರೆ. ಸೂರ್ಯನ ಭುಕ್ತಕಾಲವನ್ನು ಅವನಿಗೆ ಇಡೀ ರಾಶಿಯನ್ನು ದಾಟಲು ತಗಲುವ ಕಾಲದಿಂದ ಭಾಗಿಸಿ 30 ಭಾಗಗಳಿಂದ ಗುಣಿಸಬೇಕು, ಪ್ರಾಪ್ತ ಸಂಖ್ಯೆ ಸೂರ್ಯನು ರಾಶಿಯಲ್ಲಿ ದಾಟಿದ ಭಾಗಾದಿಗಳು ಆಗಿವೆ. ಇದು ಜನನ ಕಾಲದ ಸೂರ್ಯಸ್ಫುಟ ಆಗಿರುತ್ತದೆ. ಇದನ್ನು ತಾತ್ಕಾಲಿಕ ಸೂರ್ಯಸ್ಫುಟ ಎಂದು ಕರೆಯುತ್ತಾರೆ.

ಉದಾ:- ಜನನವು ಜುಲ್ಯಾ ತಿಂಗಳಲ್ಲಿ ಅಂದರೆ ಕರ್ಕಟಕ ಮಾಸದಲ್ಲಿ ಆಗಿರುತ್ತದೆ. ಸೂರ್ಯನು ಕರ್ಕಟಕ ರಾಶಿಯನ್ನು ಜುಲ್ಯಾ 16ನೇ ತಾರೀಕಿಗೆ 22 3/4 ಘಟಿಗೆ ಪ್ರವೇಶಿಸುತ್ತಾನೆ. ಅಗೋಸ್ಟ್ 16ನೇ ತಾರೀಕಿಗೆ 43 1/2 ಘಟಿಗೆ ನಿರ್ಗಮನ ಮಾಡುತ್ತಾನೆ. ಆದ್ದರಿಂದ 1970ನೇ ಇಸವಿಯಲ್ಲಿ ರವಿಗೆ ಕರ್ಕಟಕ ಮಾಸ ದಾಟಲು ತಗಲುವ ಕಾಲ:-

| | ದಿನ-ಘಟಿ-ವಿಘಟಿ |
|---|---|
| ತಾ. 16-7-70ರಂದು | 0 - 37 - 15 |
| ತಾ. 17 ಜುಲ್ಯಾಯಿಂದ 15 ಅಗೋಸ್ಟ್ ತನಕ | 30 - 0 - 0 |
| ತಾ. 16-8-70ರಂದು | 0 - 43 - 30 |
| ಜುಮ್ಲಾ : | 31 - 20 - 45 |

ಆದ್ದರಿಂದ ಸೂರ್ಯನಿಗೆ ಕರ್ಕಟಕ ಮಾಸ ದಾಟಲು ಅಂದರೆ ಕರ್ಕಟಕ ರಾಶಿಯ 30 ಭಾಗಗಳನ್ನು ದಾಟಲು 31 ದಿನ 20 ಘಟಿ 45 ವಿಘಟಿ ತಾಗುತ್ತದೆ.

ಸೂರ್ಯನ ಭುಕ್ತ ಅಂಶವನ್ನು ಶೋಧಿಸಲು ಅವನಿಗೆ ರಾಶಿ ಪ್ರವೇಶದಿಂದ ಜನನ ಕಾಲದ ವರೆಗೆ ದಾಟಿದ ಕಾಲ:-

| | ದಿನ-ಘಟಿ-ವಿಘಟಿ |
|---|---|
| ತಾ. 16-7-70ರಂದು | 0- 37- 15 |
| ತಾ. 17, 18 ಮತ್ತು 19ರ ತನಕ | 3- 0- 0 |
| ತಾ. 20-7-70ರಂದು | 0- 38- 35 |
| ಜುಮ್ಲಾ : | 4- 15- 50 |

ಕರ್ಕಟಕ ರಾಶಿಯಲ್ಲಿ ರವಿಯ ಭುಕ್ತಕಾಲವು 4-15-50 ಅಂದರೆ ರವಿಯು ಕರ್ಕಟಕ ರಾಶಿ ಪ್ರವೇಶಿಸಿ 4 ದಿನ 15 ಘಟಿ 50 ವಿಘಟಿ ಕಳೆಯುವಾಗ ಈ ಜನನ ಆಗಿರುತ್ತದೆ. ಇದನ್ನು ರವಿಗೆ ರಾಶಿ ದಾಟಲು ತಗಲುವ ಕಾಲದಿಂದ ಭಾಗಿಸಿ 30ರಿಂದ ಗುಣಿಸಿದರೆ ಜನನ ಕಾಲದ ರವಿಸ್ಪುಟ ಬರುತ್ತದೆ.

$$= \frac{(4-15-50)}{(31-20-45)} \times 30 = 4^{\circ}\ 4'\ 51''$$ ರವಿಸ್ಪುಟ.

ಆದ್ದರಿಂದ ರವಿಸ್ಪುಟವು ಕರ್ಕಟಕ ರಾಶಿಯಲ್ಲಿ 4 ಭಾಗ 4 ಕಲೆ 51 ವಿಕಲೆಗಳಾಗಿರುತ್ತದೆ. ಅಂದರೆ ಮೇಷಾದಿ ರವಿಸ್ಪುಟ 3 ರಾಶಿ 4 ಭಾಗ 4 ಕಲೆ 51 ವಿಕಲೆಗಳಾಗಿರುತ್ತದೆ.

## ೩೬. ಚಂದ್ರಸ್ಪುಟ

ಚಂದ್ರನು ಸಾಮಾನ್ಯವಾಗಿ ದಿನಕ್ಕೆ 1 ನಕ್ಷತ್ರದಂತೆ, ರಾಶಿಚಕ್ರದ 27 ನಕ್ಷತ್ರಗಳನ್ನು ಸಾಧಾರಣ 27 1/2 ದಿನಗಳಲ್ಲಿ ದಾಟುತ್ತಾನೆ. ಅವನಿಗೆ ಒಂದು ರಾಶಿಯನ್ನು ದಾಟಲು ಸಾದಾರಣ 2 1/4 ದಿನ ತಗಲುತ್ತದೆ. ಪಂಚಾಂಗದಲ್ಲಿ ಆಯಾ ದಿನ ಚಂದ್ರನು ಚಲಿಸುವ ನಕ್ಷತ್ರ ಸಮಾಪ್ತಿ ಕಾಲವನ್ನು ಕೊಟ್ಟಿರುತ್ತಾರೆ. ತಾ. 20-7-70ರಂದು ಶ್ರವಣಾ ನಕ್ಷತ್ರ 41 3/4 ಘಟಿಗೆ ಸಮಾಪ್ತಿಯಾಗುತ್ತದೆ. ಅನಂತರ ಧನಿಷ್ಠಾ ನಕ್ಷತ್ರ ಪ್ರಾರಂಭವಾಗಿ ತಾ. 21ರಂದು ಬೆಳಿಗ್ಗೆ 5 1/4 ಘಟಿಗೆ

ಸಮಾಪ್ತಿಯಾಗುತ್ತದೆ. ಆದ್ದರಿಂದ ಚಂದ್ರನಿಗೆ ಧನಿಷ್ಠಾ ನಕ್ಷತ್ರ ದಾಟಲು, 60-11 1/4+5 1/4 ಘಟಿಗಳು = 53 1/2 ಘಟಿಗಳು ತಾಗುತ್ತವೆ. ಇದನ್ನು ಪರಮ ಘಟಿ ಎಂದು ಕರೆಯುತ್ತಾರೆ. ಜನನ ಕಾಲಕ್ಕೆ ಚಂದ್ರನು ಧನಿಷ್ಠಾ ನಕ್ಷತ್ರವನ್ನು 26 ಘಟಿ 50 ವಿಘಟಿ ದಾಟಿರುತ್ತಾನೆ. ಇದನ್ನು ಸಂದಘಟಿ ಎಂದು ಕರೆಯುತ್ತಾರೆ. ಜನನದ ನಂತರ ಚಂದ್ರನಿಗೆ ಧನಿಷ್ಠಾ ನಕ್ಷತ್ರವನ್ನು ದಾಟಲು 26 ಘಟಿ 40 ವಿಘಟಿಗಳು ತಗಲುತ್ತವೆ. ಇದನ್ನು ಸಂದುಳಿದ ಘಟಿ ಅಥವಾ ಶಿಷ್ಟ ಘಟಿ ಎಂದು ಕರೆಯುತ್ತಾರೆ.

| | | |
|---|---|---|
| ರಾಶಿಚಕ್ರ | = | 360 ಭಾಗಗಳು, 27 ನಕ್ಷತ್ರಗಳು |
| ಒಂದು ರಾಶಿ | = | 30 ʼʼ 2 1/4 ʼʼ |
| ಒಂದು ನಕ್ಷತ್ರ | = | 13 ಬಾಗ 20 ಕಲೆ = 800 ಕಲೆಗಳು |
| ಒಂದು ನಕ್ಷತ್ರ ಚರಣ | = | 3 ಭಾಗ 20 ಕಲೆ = 200 ಕಲೆಗಳು |

| ನಕ್ಷತ್ರ | ರಿಂದ | ವರೆಗೆ |
|---|---|---|
| ಅಶ್ವಿನಿ | 0° ರಿಂದ | 13°20 |
| ಭರಣಿ | 13 21 | 26 40 |
| ಕೃತ್ತಿಕಾ | 26 41 | 40 00 |
| ರೋಹಿಣಿ | 40 01 | 53 20 |
| ಮೃಗಶಿರಾ | 53 21 | 66 40 |
| ಆರ್ದ್ರಾ | 66 41 | 80 00 |
| ಪುನರ್ವಸು | 80 01 | 93 20 |
| ಪುಷ್ಯಾ | 93 21 | 106 40 |
| ಆಶ್ಲೇಶಾ | 106 41 | 120 00 |
| ಮಘಾ | 120 01 | 133 20 |
| ಹುಬ್ಬಾ | 133 21 | 146 40 |
| ಉತ್ತರಾ | 146 41 | 160 00 |
| ಹಸ್ತಾ | 160 01 | 173 20 |
| ಚಿತ್ರಾ | 173 21 | 186 40 |
| ಸ್ವಾತಿ | 186°01 ರಿಂದ | 200°00 |
| ವಿಶಾಖಾ | 200 01 | 213 20 |
| ಅನುರಾಧಾ | 213 21 | 226 40 |
| ಜ್ಯೇಷ್ಠಾ | 226 41 | 240 00 |
| ಮೂಲಾ | 240 01 | 253 20 |
| ಪೂ. ಆ. | 253 21 | 266 40 |
| ಉ.ಆ. | 266 41 | 280 00 |
| ಶ್ರವಣಾ | 280 01 | 293 20 |
| ಧನಿಷ್ಠಾ | 293 21 | 306 40 |
| ಶತಭಿಷಾ | 306 41 | 320 00 |
| ಪೂ. ಭಾ | 320 01 | 333 20 |
| ಉ.ಭಾ. | 333 21 | 346 40 |
| ರೇವತಿ | 346 41 | 360 00 |

ಧನಿಷ್ಠಾ ನಕ್ಷತ್ರವು 293°21'ನಿಂದ 306°40 ವರೆಗೆ ಇದೆ. ಜನನ ಕಾಲದ ಚಂದ್ರಸ್ಫುಟವನ್ನು ಸಾಧಿಸಲು ಜನನ ಕಾಲಕ್ಕೆ ಸಂದಘಟಿಯನ್ನು ಪರಮ ಘಟಿಯಿಂದ ಭಾಗಿಸಿ 13° 20'ನಿಂದ ಗುಣಿಸಿ ಬಂದದ್ದನ್ನು 293°20ಗೆ ಕೂಡಿಸಿದರೆ ತಾತ್ಕಾಲಿಕ ಚಂದ್ರಸ್ಫುಟ ಸಿಗುತ್ತದೆ.

ಸಂದ ಘಟಿ = 26 ಘಟಿ 40 ವಿಘಟಿ, ಪರಮ ಘಟಿ = 53 ಘಟಿ 30 ವಿ. ಘ.

$$= \frac{(26-50)}{(53-30)} \times 13^{\circ}-20'$$

= 6 ಭಾಗ 41 ಕಲೆ 15 ವಿಕಲೆ, ಇದನ್ನು 293°20'ಗೆ ಕೂಡಿಸಲಾಗಿ ತಾತ್ಕಾಲಿಕ ಚಂದ್ರಸ್ಫುಟ = 300 ಭಾಗ 1 ಕಲೆ 15 ವಿಕಲೆ

= 10 ರಾಶಿ 0 ಭಾಗ 1ಕಲೆ 15 ವಿಕಲೆ.

## ಜನನ ಕಾಲದ ಶಿಷ್ಟದಶೆ ಶೋಧನಾ ಕ್ರಮ:-

ಜನ್ಮಕಾಲದಲ್ಲಿ ಚಂದ್ರನು ದಾಟಲು ಉಳಿದಿರುವ ಘಟಿಗಳನ್ನು (ಶಿಷ್ಟ ಘಟಿ) ಪರಮ ಘಟಿಯಿಂದ ಭಾಗಿಸಿ ದಶಾವರ್ಷದಿಂದ ಗುಣಿಸಿದರೆ ಜನ್ಮಕಾಲದಲ್ಲಿ ಸಂದುಳಿದ ದಶಾವರ್ಷಗಳು ಲಭಿಸುತ್ತವೆ,

27 ನಕ್ಷತ್ರಗಳಿಗೆ ನವಗ್ರಹರು ಅಧಿಪತಿ ಆಗಿರುತ್ತಾರೆ. ಉದಾ:- ಧನಿಷ್ಠಾ ನಕ್ಷತ್ರಕ್ಕೆ ಕುಜನು ಅಧಿಪತಿ, ಹಾಗೆಯೇ ಆ ನಕ್ಷತ್ರದಿಂದ 10ನೇ ಮತ್ತು 19ನೇ ನಕ್ಷತ್ರವಾದ ಮೃಗಶಿರಾ ಮತ್ತು ಚಿತ್ರಾ ನಕ್ಷತ್ರಕ್ಕೆ ಕುಜನೇ ಅಧಿಪತಿ ಆಗಿರುತ್ತಾನೆ. ಇದೇ ರೀತಿ ಉಳಿದ ಗ್ರಹರು ಮೂರು ಮೂರು ನಕ್ಷತ್ರಕ್ಕೆ ಅಧಿಪತಿಗಳಾಗುತ್ತಾರೆ. ಅವರ ಅಧಿಪತ್ಯ ದಶಾವರ್ಷಗಳನ್ನು ಕೋಷ್ಟಕದಲ್ಲಿ ಕೊಟ್ಟಿರುತ್ತದೆ.

**ಉದಾ:-** ಜಾತಕದ ಧನಿಷ್ಠಾ ನಕ್ಷತ್ರಕ್ಕೆ ಕುಜನು ಅಧಿಪತಿ, ಅವನ ಮಹರ್ದಶಾವರ್ಷ 7. ಜನನ ಕಾಲದಲ್ಲಿ ಶಿಷ್ಟಘಟಿಗನುಸಾರವಾಗಿ ದಶಾವರ್ಷಗಳನ್ನು ಕೆಳಗೆ ಸಂಸ್ಕರಿಸಿರುತ್ತದೆ.

$$\frac{\text{ಶಿಷ್ಟಘಟಿ} \times \text{ದಶಾವರ್ಷ}}{\text{ಪರಮಘಟಿ}} = \frac{(26-40) \times 7}{(53-30)}$$

= 3 ವರ್ಷ 5 ತಿಂಗಳು 20 ದಿನ ಶಿಷ್ಟಕುಜ ದಶಾವರ್ಷ.

# ದಶಾಂತರ್ದಶಾ ಕೋಷ್ಟಕ

| ಕೃ.ಉ.ಉ್ಹ ರವಿ 6 | ರೊ.ಹ.ಶ್ರ. ಚಂದ್ರ 10 | ಮೃ.ಚಿ.ಧ. ಕುಜ 7 | ಆ.ಸ್ವಾ.ಶ್ವ. ರಾಹು 18 | ಪು.ವಿ.ಪೂ. ಗುರು 16 | ಪು.ಅ.ಉ್ಭ. ಶನಿ 19 | ಆ.ಜ್ಯೇ.ರೇ ಬುಧ 17 | ಅ.ಮ.ಮೂ ಕೇತು 7 | ಭ.ಹು.ಪೂ್ಹ ಶುಕ್ರ 20 |
|---|---|---|---|---|---|---|---|---|
| ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. | ಭು. ತಿ. ದಿ. |
| ರ 3 18 | ಚ 10 0 | ಕು 4 27 | ರಾ 32 12 | ಗು 25 18 | ಶ 36 3 | ಬು 28 27 | ಕೇ 4 27 | ಶು 40 0 |
| ಚ 6 00 | ಕು 7 0 | ರಾ 12 18 | ಗು 28 24 | ಶ 30 12 | ಬು 32 9 | ಕೇ 11 27 | ಶು 14 00 | ರ 12 0 |
| ಕು 4 6 | ರಾ 18 0 | ಗು 11 6 | ಶ 34 6 | ಬು 27 6 | ಕೇ 13 9 | ಶು 34 00 | ರ 4 6 | ಚ 20 0 |
| ರಾ 10 24 | ಗು 16 0 | ಶ 13 9 | ಬು 30 18 | ಕೇ 11 6 | ಶು 38 0 | ರ 10 6 | ಚ 7 0 | ಕು 14 0 |
| ಗು 9 18 | ಶ 19 0 | ಬು 11 27 | ಕೇ 12 18 | ಶು 32 0 | ರ 11 12 | ಚ 17 0 | ಕು 4 27 | ರಾ 36 0 |
| ಶ 11 12 | ಬು 17 0 | ಕೇ 4 27 | ಶು 36 00 | ರ 9 18 | ಚ 19 0 | ಕು 11 27 | ರಾ 12 18 | ಗು 32 0 |
| ಬು 10 6 | ಕೇ 7 0 | ಶು 14 00 | ರ 10 24 | ಚ 16 0 | ಕು 13 9 | ರಾ 30 18 | ಗು 11 6 | ಶ 38 0 |
| ಕೇ 4 6 | ಶು 20 0 | ರ 4 6 | ಚ 18 00 | ಕು 11 6 | ರಾ 34 6 | ಗು 27 6 | ಶ 13 9 | ಬು 34 0 |
| ಶು 12 0 | ರ 6 0 | ಚ 7 0 | ಕು 12 18 | ರಾ 28 24 | ಗು 30 12 | ಶ 32 9 | ಬು 11 27 | ಕೇ 14 0 |
| ವ 6 | 10 | 7 | 18 | 16 | 19 | 17 | 7 | 20 |

## ೩೭. ಕುಜಾದಿ ಪಂಚಗ್ರಹರ ಸ್ಫುಟ

ಪಂಚಾಂಗದಲ್ಲಿ ಕುಜಾದಿ ಗ್ರಹರು ನಕ್ಷತ್ರ ಚರಣಗಳಲ್ಲಿ ಪ್ರವೇಶಿಸುವ ಮತ್ತು ನಿರ್ಗಮನ ಕಾಲವನ್ನು ಕೊಟ್ಟಿರುತ್ತಾರೆ. ಸ್ಫುಟಮಾಡುವ ಗ್ರಹನಿಗೆ ಒಂದು ನಕ್ಷತ್ರ ಚರಣ ದಾಟಲು (3 ಭಾಗ 20 ಕಲೆ) ತಗಲುವ ಕಾಲವನ್ನು ಕಂಡುಹಿಡಿದು ಆದರಿಂದ ಗ್ರಹನು ನಕ್ಷತ್ರಚರಣ ಪ್ರವೇಶ ಕಾಲದಿಂದ ಜನನ ಕಾಲದ ವರೆಗೆ ದಾಟಿದ ಕಾಲವನ್ನು ಭಾಗಿಸಿ 3 ಭಾಗ 20 ಕಲೆಗಳಿಂದ ಗುಣಿಸಿ ಬಂದ ಭಾಗಾದಿಗಳನ್ನು ನಕ್ಷತ್ರಚರಣ ಪ್ರವೇಶ ಕಾಲದ ಸ್ಫುಟಕ್ಕೆ ಕೂಡಿಸಿದರೆ ಇಷ್ಟಕಾಲದ ಗ್ರಹಸ್ಫುಟ ಬರುತ್ತದೆ.

ಉದಾ:- ಪಂಚಾಗದಲ್ಲಿ 18-7-70ರಂದು 26 ಗಳಿಗೆಗೆ ಕುಜನು ಪುಷ್ಯಾ ನಕ್ಷತ್ರ ಒಂದನೇ ಚರಣದಿಂದ ನಿರ್ಗಮನ ಹೊಂದಿ 2ನೇ ಚರಣವನ್ನು ಪ್ರವೇಶಿಸುತ್ತಾನೆ. ಪುಷ್ಯಾ ನಕ್ಷತ್ರವು 93 ಭಾಗ 20 ಕಲೆಯಿಂದ ಪ್ರಾರಂಭವಾಗುತ್ತದೆ. ಆದಕ್ಕೆ ಕುಜನು ದಾಟಿದ ಕುಜಸ್ಫುಟ 96 ಭಾಗ 40 ಕಲೆಗಳಾಗಿರುತ್ತದೆ. ತಾ. 23-7-70ರಂದು 37 ಗಳಿಗೆಗೆ ಕುಜನು ಪುಷ್ಯಾ ನಕ್ಷತ್ರದ ದ್ವಿತೀಯ ಚರಣದಿಂದ ನಿರ್ಗಮನ ಹೊಂದಿ ತೃತೀಯ ಚರಣವನ್ನು ಪ್ರವೇಶಿಸುತ್ತಾನೆ. ಆಗ ಕುಜಸ್ಫುಟ 100 ಭಾಗ ಆಗಿರುತ್ತದೆ. ಆದ್ದರಿಂದ ಕುಜನಿಗೆ 3 ಭಾಗ ಕಲೆಗಳನ್ನು ದಾಟಲು ತಗಲುವ ಕಾಲ:-

| | ದಿನ-ಘಟಿ-ವಿಘಟಿ |
|---|---|
| ತಾ. 18-7-70ರಂದು ಶಿಷ್ಟಘಟಿ | 0- 34- 0 |
| ತಾ. 19ರಿಂದ 22 ಜುಲ್ಯಾ ತನಕ | 4- 0- 0 |
| ತಾ. 23-7-70ರಂದು | 0- 37- 0 |
| ಜುಮ್ಲಾ: | 5- 11- 0 |

ಅಂದರೆ ಕುಜನಿಗೆ 2 ಭಾಗ 20 ಕಲೆಗಳನ್ನು ದಾಟಲು ತಗಲುವ ಕಾಲ 5 ದಿನ 11 ಘಟಿಗಳಾಗಿರುತ್ತದೆ.

ಕುಜನು ಪ್ರವೇಶ ಕಾಲದ ನಂತರ ಜನನ ಕಾಲದ ವರೆಗೆ ದಾಟಿದ ಕಾಲ:-

| | ದಿನ-ಘಟಿ-ವಿಘಟಿ |
|---|---|
| ತಾ. 18-7-70ರಂದು ಶಿಷ್ಟ | 0- 34- 0 |
| 19-7-70 ,, | 1- 0- 0 |
| 20-7-70 ,, | 0- 38- 35 |
| ಜುಮ್ಲಾ: | 2- 12- 35 |

$$= \frac{(2-12-35)}{(5-11-0)} \times 3\ 20$$ = 1 ಭಾಗ 25 ಕಲೆ 16 ವಿಕಲೆ

18-7-70ರ ಪ್ರವೇಶ ಕಾಲದ ಕುಜಸ್ಫುಟಕ್ಕೆ (96°40') ಜನನ ಕಾಲದ ವರೆಗೆ ಕುಜನು ದಾಟಿದ 1 ಭಾಗ 25 ಕಲೆಗಳನ್ನು ಕೂಡಿಸಲಾಗಿ ತಾತ್ಕಾಲಿಕ ಕುಜಸ್ಫುಟ 98 ಭಾಗ 5 ಕಲೆ 16 ವಿಕಲೆಗಳು ಬರುತ್ತದೆ.

= ಮೇಷಾದಿ ಕುಜಸ್ಫುಟ 3 ರಾಶಿ 8 ಭಾಗ 5 ಕಲೆ 16 ವಿಕಲೆ.

ಇದೇ ರೀತಿ ಬುಧ, ಗುರು, ಶುಕ್ರ ಮತ್ತು ಶನಿಸ್ಫುಟಗಳನ್ನು ತಯಾರಿಸಬೇಕು. ಗ್ರಹನು ವಕ್ರನಾದಾಗ ಸಂಶೋಧಿತ ಭಾಗಾದಿಗಳನ್ನು ಪ್ರವೇಶ ಕಾಲದ ಸ್ಫುಟದಿಂದ ಕಳೆಯಬೇಕು.

## ೩೮. ರಾಹು, ಕೇತುಗಳ ಸ್ಫುಟ

ರಾಹು ಕೇತುಗಳ ಗತಿಯು ಅಪಸವ್ಯ ಆಗಿರುತ್ತದೆ. ಹಾಗೂ ದೈನಂದಿನ ಚಾರವು ಸುಮಾರು 3 ಕಲೆ 20 ವಿಕಲೆಗಳಾಗಿರುತ್ತದೆ. ನಕ್ಷತ್ರಚರಣ ಪ್ರವೇಶ ಕಾಲದ ರಾಹುಸ್ಫುಟವನ್ನು ತಿಳಿದು ಅಥವಾ ಪಂಚಾಂಗದಲ್ಲಿ ಕೊಟ್ಟಿರುವ ಹುಣ್ಣಿಮೆ ಅಥವಾ ಅಮಾವಾಸ್ಯೆಯ ದಿನ ಸೂರ್ಯೋದಯದ ರಾಹು ಕೇತುಗಳ ಸ್ಫುಟವನ್ನು ತಿಳಿದು ಅದನ್ನು ಸಂಸ್ಕರಿಸಿದರೆ ತಾತ್ಕಾಲಿಕ ರಾಹುಸ್ಫುಟ ಲಭಿಸುತ್ತದೆ.

18-7-70ರಂದು ಹುಣ್ಣಿಮೆಯ ದಿನ ಸೂರ್ಯೋದಯಕ್ಕೆ ರಾಹುಸ್ಫುಟವು 10 ರಾಶಿ 11 ಭಾಗ 21 ಕಲೆಗಳಾಗಿರುತ್ತದೆ. 18-7-70ರಿಂದ ಜನನ ಕಾಲದ

ವರೆಗೆ 2 ದಿನ 38 ಘಟಿ 35 ವಿಘಟಿ ಕಾಲ ಸಂದಿರುತ್ತದೆ. ದೈನಂದಿನ ಗತಿ 3 ಕಲೆ 20 ವಿಕಲೆಯಂತೆ ಜನನ ಕಾಲದ ವರೆಗೆ 12 ಕಲೆ 13 ವಿಕಲೆ ರಾಹು ಕೇತುಗಳು ಹಿಂದಕ್ಕೆ ಚಲಿಸಿರುತ್ತಾರೆ. ಹುಣ್ಣಿಮೆಯ ರಾಹುಸ್ಫುಟದಿಂದ 12 ಕಲೆ 13 ವಿಕಲೆಗಳನ್ನು ಸಂಸ್ಕರಿಸಿದರೆ 10 ರಾಶಿ 11 ಭಾಗ 8 ಕಲೆ 47 ವಿಕಲೆ ತಾತ್ಕಾಲಿಕ ರಾಹುಸ್ಫುಟ ಲಭಿಸುತ್ತದೆ. ರಾಹು ಸ್ಫುಟಕ್ಕೆ 6 ರಾಶಿ ಕೂಡಿಸಿದರೆ, ಕೇತುಸ್ಫುಟ ಲಭಿಸುತ್ತದೆ.

## ೩೯. ಲಗ್ನಸ್ಫುಟ ಸಾಧನೆ

**ತಾತ್ಕಾಲಿಕೋಃ ಕೋಃಯನ ಭಾಗ ಯುಕ್ತಸ್ತದ್ಭೋಗ್ಯ ಭಾಗೈರುದಯೋ ಹತ: ಸ್ವ: । ಖಾಗ್ನುದ್ಧೃತಸ್ತಂ ರವಿಭೋಗ್ಯಕಾಲಂ ವಿಶೋಧಯೇದಿಷ್ಟ ಘಟೀ ಫಲೇಭ್ಯ: ॥೧೭೬॥**

**ತದಗ್ರತೋ ರಾಶ್ಯುದಯಾಂಶ್ಚ ಶೇಷಮಶುದ್ಧ ಹೃತ್ ಖಾಗ್ನಿಗುಣಂ ಲವಾದ್ಯಮ್ ।ಅಶುದ್ಧ ಪೂರ್ವೈರ್ಭನನೈರಜಾದ್ಯೈರ್ಯುಕ್ತಂ ತನು: ಸ್ಯಾದಯನಾಂಶ ಹೀನಮ್ ॥೧೭೭॥**

ತಾತ್ಕಾಲಿಕ ರವಿಸ್ಫುಟಕ್ಕೆ ಜನನ ಕಾಲದ ಅಯನಾಂಶವನ್ನು ಕೂಡಿಸಿದರೆ ಜನನ ಕಾಲದ ಸಾಯನ ರವಿಸ್ಫುಟ ಲಭಿಸುತ್ತದೆ. ಈ ಸ್ಫುಟಕ್ಕೆ ಅನುಗುಣವಾದ ರಾಶಿಯಲ್ಲಿ ರವಿಯು ಭಾಗಾದಿಗಳನ್ನು ಭುಕ್ತವೆಂತಲೂ ದಾಟಲು ಉಳಿದಿರುವ ರಾಶಿಯ ಭಾಗಾದಿಗಳನ್ನು ಭೋಗ್ಯವೆಂತಲೂ ಕರೆಯುತ್ತಾರೆ. ರವಿಯ ಭೋಗ್ಯ ಕಾಲವನ್ನು ಜನನ ಘಟಿಯಿಂದ ಕಳೆಯಬೇಕು. ಶೇಷದಿಂದ ಆಗಾಮಿ ರಾಶಿಗಳ ಪರಿಮಾಣವನ್ನು ಕಳೆಯುತ್ತಾ ಬರಬೇಕು. ಕಳೆಯಲು ನ್ಯೂನವಾಗುವ ರಾಶಿಯನ್ನು ಅಶುದ್ಧ ರಾಶಿಯೆಂದು ಕರೆಯುತ್ತಾರೆ. ಶೇಷವು ಅಶುದ್ಧ ರಾಶಿಯ ಯಾವ ಅಂಶವೆಂದು ತಿಳಿದು, ಅದನ್ನು ಸಂಸ್ಕರಿಸಿ ಆದಕ್ಕನುಗುಣವಾದ ಅಶುದ್ಧ ರಾಶಿಯ ಭುಕ್ತಭಾಗಾದಿಗಳನ್ನು ಕಂಡುಹಿಡಿಯಬೇಕು. ಇದು ಸಾಯನ ಲಗ್ನಸ್ಫುಟ ಆಗುತ್ತದೆ. ಇದರಿಂದ ತಾತ್ಕಾಲಿಕ ಅಯನಾಂಶ ಕಳೆಯಲು ಜನನಕಾಲದ ನಿರಯನ ಲಗ್ನಸ್ಫುಟ ಲಭಿಸುತ್ತದೆ. (ಅಯನಾಂಶವು ವರ್ಷಕ್ಕೆ 50.26 '' ಹೆಚ್ಚಾಗುತ್ತದೆ).

ಉದಾ:- ಜನನ ತಾ. 4-11-1933 ಸಮಯ 12.50 ಮಧ್ಯಾಹ್ನ ಅಕ್ಷಾಂಶ 12°52' ಉತ್ತರ ರೇಖಾಂಶ 74°50' ಪೂರ್ವ ಸೂರ್ಯೋದಯ ಬೆಳಿಗ್ಗೆ ಸ್ಟ್ಯಾಂಡರ್ಡ್ ಘಂಟೆ 6.28' ಅಥವಾ ಸ್ಥಳೀಯ ಕಾಲಮಾನ ಘಂಟೆ 5.57 ಸೂರ್ಯೋದಯಾತ್ ಜನನ ಘಟಿ = 15 ಘಟಿ 55 ವಿಘಟಿ.

## ಸ್ಥಳೀಯ ರಾಶ್ಯುದಯಕಾಲದ ಪರಿಮಾಣ:-

| 4-12 1/3<br>1514 | ಘ. ವಿ.<br>4-12 1/3<br>1514 ಅ. | 4-37 2/3<br>1666 | 5-13<br>1878 ಅ. |
|---|---|---|---|
| 4-37 2/3<br>1666 | 12°52' ಅಕ್ಷಾಂಶ<br>ರಾಶ್ಯುದಯ<br>ಪರಿಮಾಣಗಳು | | 5-30 1/2<br>1983 |
| 5-13<br>1878 | | | 5-20 5/6<br>1925 |
| 5-30 1/2<br>1983 | 5-30 5/6<br>1925 | 5-05 2/3<br>1834 | 5-05 2/3<br>1834 |

ತಾತ್ಕಾಲಿಕ ಸೂರ್ಯಸ್ಪುಟ = 6 ರಾಶಿ 18 ಭಾಗ 40 ಕಲೆ 15 ವಿಕಲೆ.
'' ಅಯನಾಂಶ = 0 ರಾಶಿ 22 ಭಾಗ 56 ಕಲೆ 15 ವಿಕಲೆ.
= ಸಾಯನ ರವಿ = 7 ರಾಶಿ 11 ಭಾಗ 36 ಕಲೆ 30 ವಿಕಲೆ.

ರವಿಗೆ ಭೋಗ್ಯಭಾಗವು ದಾಟಲು ತಗಲುವ ಕಾಲ.

$$\frac{18\text{-}23\text{-}30}{30} \times 5\text{-}20\ 5/6$$

= 3 ಘಟಿ 16 ವಿಘಟಿ 4 ಅಸು.

| | | ಘಟಿ-ವಿಘಟಿ-ಅಸು |
|---|---|---|
| ಅಂದರೆ ವೃಶ್ಚಿಕಭೋಗ್ಯ | = | 3 - 16 - 4 |
| ಧನು | = | 5 - 30 - 3 |
| ಮಕರ | = | 4 - 13 - 0 |
| | | 14 - 00 - 1 |

ಜನನ ಘಟಿ = 15-55-0

ಭುಕ್ತ = 14- 0-1

1-54-5 ಕುಂಭ ರಾಶಿಯಲ್ಲಿ ಭುಕ್ತ ಅಂಶಾದಿ.

$$\frac{\text{ಅಂದರೆ ಕುಂಭಭುಕ್ತ} \times 30 \text{ ಭಾಗ}}{\text{ಕುಂಭ ಪರಿಮಾಣ}} = \frac{(1\text{-}54\text{-}5)}{(4\text{-}37\text{-}4)} \times 30$$

= 12 ಭಾಗ 24 ಕಲೆ 25 ವಿಕಲೆ.

| | | |
|---|---|---|
| ಅಂದರೆ ಸಾಯನ ಲಗ್ನಸ್ಫುಟ | = | 10 ರಾ $12^\circ 24' 25''$ |
| ಅಯನಾಂಶ | = | 0 $22^\circ 56' 15''$ |
| ನಿರಯನ ಲಗ್ನಸ್ಫುಟ | = | 9 ರಾ $19^\circ 28' 10''$ |

ಉದಾ. ಜಾತಕ:- 20-7-70 ರಂದು ರಾತ್ರೆ 9-40ಕ್ಕೆ ಜನನ.

| | | |
|---|---|---|
| ನಿರಯನ ರವಿಸ್ಫುಟ | = | 3 ರಾ $4^\circ$ $4'$ $51''$ |
| ತಾತ್ಕಾಲಿಕ ಅಯನಾಂಶ | = | 0 $23^\circ 26'$ $52''$ |
| ಅಂದರೆ ಸಾಯನ ರವಿಸ್ಫುಟ | = | 3 ರಾ $27^\circ 31'$ $43''$ |

ಕರ್ಕಟಕ ರಾಶಿಯಲ್ಲಿ ಭೋಗ್ಯ = 0-2°-28'-17''

$$= \frac{(2^{\circ}-28'-17'')}{(5-30\ 1/2)} \times 30 =$$ ಘ. ವಿ. ಅ. 0-27-2

| | | ಘ. ವಿ. ಅ. |
|---|---|---|
| ಕರ್ಕಟಕ ಭೋಗ್ಯ | = | 0 - 27 - 2 |
| ಸಿಂಹ | = | 5 - 20 - 5 |
| ಕನ್ಯಾ | = | 5 - 05 - 4 |
| ತುಲಾ | = | 5 - 05 - 4 |
| ವೃಶ್ಚಿಕ | = | 5 - 20 - 5 |
| ಧನು | = | 5 - 30 - 3 |
| ಮಕರ | = | 5 - 13 - 0 |
| ಕುಂಭ | = | 4 - 37 - 4 |
| | | 36 - 41 - 3 |

| | ಘಟಿ | ವಿಘಟಿ | ಅಸು |
|---|---|---|---|
| ಜನನ ಘಟಿ ಸೂರ್ಯೋದಯಾತ್ | 38 - | 35 - | - |
| ಕುಂಭ ರಾಶಿಯ ವರೆಗೆ ಸಂದ ಘಟಿ | 36 - | 41 - | 3 |
| ಮೀನ ರಾಶಿಯಲ್ಲಿ ಭುಕ್ತ | 1 - | 53 - | 3 |

$$\frac{(1-53-3)}{(4-12-2)} \times 30 = \frac{\text{ಮೀನರಾಶಿ ಭುಕ್ತ} \times \text{ರಾಶಿ ಭಾಗಗಳು}}{\text{ಮೀನ ಪರಿಮಾಣ.}}$$

= 13° 29' 45''

| | | |
|---|---|---|
| ಅಂದರೆ ಸಾಯನ ಲಗ್ನಸ್ಫುಟ | = | 11ರಾಶಿ13° 29' 45'' |
| ಅಯನಾಂಶ | = | 0 - 23°- 26' - 52'' |
| ನಿರಯನ ಲಗ್ನಸ್ಫುಟ | = | 10 - 20°- 02' - 53'' |

# ೪೦. ಮಾಂದಿಸ್ಫುಟ

ಉದಾ:- ಜನನ ತಾ. 20-7-70 ಚಂದ್ರವಾರ ರಾತ್ರೆ 9-40ಕ್ಕೆ

ಆ ದಿನ ಸೂರ್ಯೋದಯ ಬೆಳಿಗ್ಗೆ 6.14 ಸ್ಟೆ. ಘ.

'' ಸೂರ್ಯಾಸ್ತ ಸಂಜೆ 6.58 ''

ಅಂದರೆ ದಿನಮಾನ 12 ಘ. 44 ಮಿ = 31 ಘಟಿ 50 ವಿಘಟಿ

ಅಂದರೆ ರಾತ್ರೆಮಾನ 60 ಘಟಿ-31 ಘ. 50 ವಿ. = 28 ಘಟಿ 10 ವಿಘಟಿ

ಚಂದ್ರವಾರ ರಾತ್ರೆ ಮಾಂದಿ ಉದಯ ಕಾಲವು ರಾತ್ರೆಮಾನ 30 ಘಟಿ ಇರುವಾಗ ಸೂಯಾಸ್ತವಾಗಿ 6 ಘಟಿಯಲ್ಲಿ ಆಗುತ್ತದೆ. ರಾತ್ರೆಮಾನದಲ್ಲಿ ವ್ಯತ್ಯಾಸವಿದ್ದಲ್ಲಿ ತ್ರೈರಾಶಿಕ ಕ್ರಮದಿಂದ ಮಾಂದಿ ಉದಯ ಕಾಲವನ್ನು ತಿಳಿಯಬೇಕು.

ಉದಾ:- ಜಾತಕದಲ್ಲಿ ರಾತ್ರೆಮಾನ 28 ಘ. 10 ವಿ.

ಅಂದರೆ ಮಾಂದಿ ಉದಯಕಾಲ = $\frac{(28 \text{ ಘ. } 10 \text{ ವಿ.}) \times 6}{30}$

= 5 ಘಟಿ 38 ವಿಘಟಿ, ಸೂರ್ಯಾಸ್ತವಾದ ನಂತರ ಮಾಂದಿ ಉದಯ ಆಗುತ್ತದೆ. ಇದಕ್ಕೆ ದಿನಮಾನ 31 ಘಟಿ 50 ವಿಘಟಿ ಕೂಡಿಸಲಾಗಿ ಮಾಂದಿ ಉದಯ ಕಾಲವು ಸೂರ್ಯೋದಯಾತ್ ಘಟಿ 37 ವಿಘಟಿ 28ಕ್ಕೆ ಆಗುತ್ತದೆ. 37 ಘ. 28 ವಿ. ಉದಯವಾಗುವ ರಾಶಿಯ ಭಾಗಾದಿಗಳನ್ನು ಲಗ್ನಸ್ಫುಟದಂತೆ ಶೋಧಿಸಿದ್ದಲ್ಲಿ ತಾತ್ಕಾಲಿಕ ಮಾಂದಿ ಸ್ಫುಟವು ಲಭಿಸುತ್ತದೆ.

ಜನನ ಕಾಲದ ಸಾಯನ ರವಿಸ್ಫುಟ 3 ರಾ 27° 31' 43''

| | | ಘ. ವಿ. ಅ. |
|---|---|---|
| ರವಿಯ ಕರ್ಕಟಕ ಭೋಗ್ಯ | = | 0 - 27 - 2 |
| ಸಿಂಹ | = | 5 - 20 - 5 |
| ಕನ್ಯಾ | = | 5 - 05 - 4 |
| ತುಲಾ | = | 5 - 05 - 4 |
| ವೃಶ್ಚಿಕ | = | 5 - 20 - 5 |
| ಧನು | = | 5 - 30 - 3 |
| ಮಕರ | = | 5 - 13 - 0 |
| ಕುಂಭ | = | 4 - 37 - 4 |
| | ಜುಮ್ಲಾ | 36 - 41 - 3 |

| | | |
|---|---|---|
| ಮಾಂದಿ ಉದಯ ಘಟಿ | = | 37-28-0 |
| ಕುಂಭ ರಾಶಿಯ ವರೆಗೆ | = | 36-41-3 |
| ಮೀನ ರಾಶಿಯಲ್ಲಿ ಭುಕ್ತ | = | 0-46-3 |

| | | |
|---|---|---|
| ಅಂದರೆ ಸಾಯನ ಮಾಂದಿ ಸ್ಫುಟ | = | 11 ರಾಶಿ 5° 31' 42'' |
| ಅಯನಾಂಶ | = | 0 - 23°- 26'- 52'' |
| ನಿರಯನ ಮಾಂದಿ ಸ್ಫುಟ | = | 10 - 12°- 4' - 50'' |

ಈ ಜನನ ಕಾಲದಲ್ಲಿ ಮಾಂದಿ ಅಥವಾ ಗುಳಿಕನು ಕುಂಭ ರಾಶಿಯಲ್ಲಿ 12 ಭಾಗ 4 ಕಲೆ 50 ವಿಕಲೆಗಳಲ್ಲಿ ಅಂದರೆ ಶತಭಿಷಾ ನಕ್ಷತ್ರ ದ್ವಿತೀಯ ಚರಣದಲ್ಲಿ ಇದ್ದಾನೆ.

## ೪೧. ಯಮ ಕಂಟಕ ಸ್ಫುಟ

ಚಂದ್ರವಾರ ರಾತ್ರೆ ಯಮಕಂಟಕನ ಉದಯಕಾಲವು ರಾತ್ರೆಮಾನ 30 ಘಟಿ ಇರುವಾಗ ಸೂರ್ಯಾಸ್ತವಾಗಿ 26 ಘಟಿಯಲ್ಲಿ ಆಗುತ್ತದೆ, ರಾತ್ರೆಮಾನ ವ್ಯತ್ಯಾಸವಿದ್ದಲ್ಲಿ ತ್ರೈರಾಶಿಕ ಕ್ರಮದಿಂದ ಯಮಕಂಟಕನ ಉದಯ ಕಾಲವನ್ನು ತಿಳಿಯಬೇಕು.

ಉದಾ:- ಜಾತಕದ ರಾತ್ರೆಮಾನ 28 ಘ. 10 ವಿ.

ಅಂದರೆ ಯಮಕಂಟಕ ಉದಯ ಕಾಲ $\frac{28 \text{ ಘ } 10 \text{ ವಿ. } \times 26}{30 \text{ ಘ.}}$

= 24 ಘಟಿ 24 ವಿ. 4 ಅಸು ಸೂರ್ಯಾಸ್ತ ಘಟಿ.

ಮಾಂದಿಸ್ಫುಟದಂತೆ ಸಂಸ್ಕರಿಸಲು

ಯಮಕಂಟಕ ಸ್ಫುಟ = 2 ರಾಶಿ 13° 37' 2''

## ೪೨. ಅರ್ಧಪ್ರಹಾರ ಸ್ಫುಟ

ಅರ್ಧಪ್ರಹಾರನ ಉದಯ ಕಾಲವು ಚಂದ್ರವಾರ ರಾತ್ರೆಮಾನ 30 ಘಟಿ ಇರುವಾಗ 22 ಘಟಿ ಕಾಲ ಆಗಿರುತ್ತದೆ. ಗುಳಿಕನಂತೆ ಸಂಸ್ಕರಿಸಲು.

ಅರ್ಧಪ್ರಹಾರನ ಉದಯಕಾಲ = $\frac{28 \text{ ಘ. } 10. \text{ ವಿ.}}{30 \text{ ಘ.}} \times 22$ ಘ

= 20 ಘ. 39 ವಿ. 2 ಅ. ಸೂಯಾಸ್ತ ಘಟಿ.

ಅಂದರೆ ಅರ್ಧಪ್ರಹಾರ ಸ್ಫುಟ = 1 ರಾಶಿ 22° 24' 54''

## ೪೩. ಕಾಲಸ್ಫುಟ

ಕಾಲನ ಉದಯ ಕಾಲವು ಚಂದ್ರವಾರ ರಾತ್ರಿಮಾನ 30 ಘಟಿ ಇರುವಾಗ 10 ಘಟಿ ಕಾಲ ಆಗಿರುತ್ತದೆ. ಮಾಂದಿಯಂತೆ ಸಂಸ್ಕರಿಸಲು

$$\frac{\text{ಕಾಲನ ಉದಯ ಕಾಲ } 28 \text{ ಘ. } 10 \text{ ವಿ.}}{30 \text{ ಘ.}} \times 10$$

= 9 ಘಟಿ 23 ವಿ. 2 ಅಸು. ಸೂರ್ಯಾಸ್ತ ಘಟಿ.

ಅಂದರೆ ಕಾಲಸ್ಫುಟ 11 ರಾಶಿ $8^\circ$ 52' 14''

### ಉದಾಹರಣೆ ಜಾತಕದಲ್ಲಿ ಸಂಶೋಧಿತ ಗ್ರಹಾದಿ ಸ್ಫುಟಗಳು:

| | ರಾ. ಭಾ. ಕ. ವಿ. | ಉಪಗ್ರಹ ಸ್ಫುಟಗಳು | ರಾ. ಭಾ. ಕ. ವಿ. |
|---|---|---|---|
| ಲಗ್ನಸ್ಫುಟ | 10 20 2 53 | ಕಾಲಸ್ಫುಟ | 11 8 52 14 |
| ರವಿಸ್ಫುಟ | 3 4 4 15 | ಪರಿವೇಷ | 10 12 35 9 |
| ಚಂದ್ರ | 10 0 1 15 | ಧೂಮ | 7 17 24 51 |
| ಕುಜ | 3 8 5 16 | ಅರ್ಧಪ್ರಹಾರ | 1 22 24 54 |
| ಬುಧ | 3 18 47 0 | ಯಮಕಂಟಕ | 2 13 37 2 |
| ಗುರು | 6 3 42 22 | ಇಂದ್ರಚಾಪ | 1 17 24 51 |
| ಶುಕ್ರ | 4 15 39 5 | ಗುಳಿಕ(ಮಾಂದಿ) | 10 12 4 50 |
| ಶನಿ | 0 27 22 22 | ವ್ಯತೀಪಾತ | 4 12 35 9 |
| ರಾಹು | 10 11 8 47 | ಉಪಕೇತು | 2 4 4 51 |
| ಕೇತು | 4 11 8 47 | | |

## ೪೪. ಆರೂಢ ಅಥವಾ ಪದ ಸಾಧನೆ.

**ಲಗ್ನಾದ್ ಯಾವತಿಥೇ ರಾಶೌ ತಿಷ್ಠೇಲ್ಲಗ್ನೇಶ್ವರಃ ಕ್ರಮಾತ್।**
**ತತಸ್ತಾವತಿಥೇ ರಾಶೌ ಲಗ್ನಸ್ಯ ಪದಮುಚ್ಯತೇ ॥೧೭೮॥**

ಲಗ್ನದಿಂದ ಲಗ್ನಾಧಿಪತಿಯು ಎಷ್ಟು ರಾಶಿ ದೂರ ಇರುವನೋ ಅಲ್ಲಿಂದ ಅಷ್ಟು ದೂರ ಇರುವ ರಾಶಿಯನ್ನು ಲಗ್ನಪದ ಅಥವಾ ಲಗ್ನಾರೂಢ ರಾಶಿಯೆಂದು ಕರೆಯುತ್ತಾರೆ. ಆ ರಾಶ್ಯಾಧಿಪನನ್ನು ಆರೂಢ ಲಗ್ನಾಧಿಪತಿ ಎಂದು ಕರೆಯುತ್ತಾರೆ.

| | ಶನಿ | | ಆರೂಢಲಗ್ನ |
|---|---|---|---|
| ಲಗ್ನ | ರಾಶಿಚಕ್ರ | | |
| | | | |
| | | | |

**ಸರ್ವೇಷಾಮಪಿ ಭಾವಾನಾಂ ಜ್ಞೇಯಮೇವಂ ಪದಂ ದ್ವಿಜ! ।**
**ತನುಭಾವಪದಂ ತತ್ರ ಬುಧಾ ಮುಖ್ಯಪದಂ ವಿದುಃ ॥೧೭೯॥**

ಇದೇ ರೀತಿ ಸಕಲ ಭಾವಗಳ ಆರೂಢ ಅಥವಾ ಪದವನ್ನು ಶೋಧಿಸಬೇಕು. ಇವುಗಳಲ್ಲಿ ಲಗ್ನಪದವೇ ಮುಖ್ಯಪದ ಆಗಿರುತ್ತದೆ.

**ಅಥಾಽಹಂ ಪದಮಾಶ್ರಿತ್ಯ ಫಲಂ ಕಿಂಚಿದ್ ಬ್ರುವೇ ದ್ವಿಜ! ।**
**ಪದಾದೇಕಾದಶೇ ಸ್ಥಾನೇ ಗ್ರಹೈರ್ಯುಕ್ತೇಽಥವೇಕ್ಷಿತೇ ॥೧೮೦॥**

**ಧನವಾನ್ ಜಾಯತೇ ಬಾಲಸ್ತಥಾ ಸುಖಸಮನ್ವಿತಃ। ಶುಭಯೋ-**
**ಗಾತ್ ಸುಮಾರ್ಗೇಣ ಧನಾಪ್ತಿಃ ಪಾಪತೋಽನ್ಯಥಾ ॥೧೮೧॥**

ಲಗ್ನಪದದಿಂದ ಲಾಭದಲ್ಲಿ ಗ್ರಹರ ಯೋಗ ದೃಷ್ಟಿ ಇದ್ದರೆ ಜಾತಕನು ಧನವಂತನು, ಸುಖವಂತನು, ಆಗುತ್ತಾನೆ. ಶುಭಗ್ರಹರ ಯೋಗವಾದರೆ ನೀತಿಯಿಂದ, ಅಶುಭ ಗ್ರಹಯೋಗವಾದರೆ ಅನೀತಿಯ ಮಾರ್ಗದಿಂದ ಲಾಭವನ್ನು ಗಳಿಸುತ್ತಾನೆ. ಶುಭಾಶುಭ ಗ್ರಹಯೋಗವಾದರೆ ನೀತಿ ಮತ್ತು ಅನೀತಿಯ ಮಾರ್ಗದಿಂದ ಲಾಭವನ್ನು ಗಳಿಸುತ್ತಾನೆ.

**ಪದಾರೂಢಾದ್ ವ್ಯಯೇ ಶುಕ್ರಭಾನು-ಸ್ವರ್ಭಾನುಭಿರ್ಯುತೇ ।**
**ರಾಜಮೂಲಾದ್ ವ್ಯಯೋ ವಾಚ್ಯಶ್ಚಂದ್ರದೃಷ್ಟ್ಯಾ ವಿಶೇಷತಃ ೧೮೨ ॥**

ಲಗ್ನಪದದಿಂದ ದ್ವಾದಶದಲ್ಲಿ ಶುಕ್ರ, ರವಿ, ಅಥವಾ ರಾಹು ಇದ್ದರೆ ರಾಜ ಮೂಲದಿಂದ ಅಥವಾ ಸರಕಾರದಿಂದ ಧನವ್ಯಯ ಆಗುತ್ತದೆ. ಈ ಗ್ರಹರನ್ನು ಚಂದ್ರನು ನೋಡಿದರೆ ವಿಶೇಷವಾಗಿ ಧನವ್ಯಯ ಆಗುತ್ತದೆ.

**ಪದಾರೂಢಾದ್ ವ್ಯಯೇ ಸೌಮ್ಯೇ ಶುಭ ಖೇಟಯುತೇಕ್ಷಿತೇ ।**
**ಜ್ಞಾತೀ ಮಧ್ಯೇ ವ್ಯಯೋ ನಿತ್ಯಂ ಪಾಪದೃಕ್ ಕಲಹಾದ್ ವ್ಯಯಃ**

ಲಗ್ನಪದದಿಂದ ದ್ವಾದಶದಲ್ಲಿ ಬುಧನು ಶುಭಗ್ರಹರಿಂದ ದೃಷ್ಟ, ಅಥವಾ ಯುತನಾಗಿದ್ದರೆ ಯಾವಾಗಲೂ ಸಂಬಂಧಿಕರಿಗೋಸ್ಕರ ಧನ ವ್ಯಯ ಆಗುತ್ತದೆ ವ್ಯಯದ ಬುಧನ ಪಾಪದೃಷ್ಟ, ಅಥವಾ ಯುತನಾದರೆ ಸಂಬಂಧಿಕರೊಂದಿಗೆ ಕಲಹ ಸಂಭವಿಸಿ ಧನವ್ಯಯ ಆಗುತ್ತದೆ.

**ಪದಾದ್ವ್ಯಯೇ ಸುರಾಚಾರ್ಯೇ ವೀಕ್ಷಿತೇ ಚಾನ್ಯಖೇಚರೈಃ ।**
**ಕರಮೂಲಾದ್ ವ್ಯಯೋ ವಾಚ್ಯಃ ಸ್ವಸ್ಯೈವ ದ್ವಿಜ ಸತ್ತಮ! ॥೧೮೪॥**

ಲಗ್ನಪದದಿಂದ ವ್ಯಯದಲ್ಲಿ ಅನ್ಯ ಗ್ರಹರಿಂದ ನೋಡಲ್ಪಟ್ಟ ಗುರುವು ಸ್ಥಿತನಾದರೆ ತನ್ನ ಕೈಯಿಂದಲೇ ಧನವ್ಯಯ ಮಾಡುತ್ತಾನೆ.

**ಆರೂಢಾದ್ ದ್ವಾದಶೇ ಸೌರೇ ಧರಾಪುತ್ರೇಣ ಸಂಯುತೇ ।**
**ಅನ್ಯಗ್ರಹೇಕ್ಷಿತೇ ವಿಪ್ರ! ಭ್ರಾತೃವರ್ಗಾದ್ ಧನವ್ಯಯಃ ॥೧೮೫॥**

ಲಗ್ನಾರೂಢದಿಂದ ದ್ವಾದಶದಲ್ಲಿ ಶನಿಯು ಕುಜನಿಂದ ಯುತನಾಗಿ ಅನ್ಯ ಗ್ರಹರಿಂದ ನೋಡಲ್ಪಟ್ಟರೆ ಸಹೋದರರಿಂದ ಧನವ್ಯಯ ಆಗುತ್ತದೆ.

**ಅರೂಢಾತ್ ಸಪ್ತಮೇ ರಾಹುರಥವಾ ಸಂಸ್ಥಿತಃ ಶಿಖೀ ।**
**ಕುಕ್ಷಿವ್ಯಥಾಯುತೋ ಬಾಲಃ ಶಿಖಿನಾ ಪೀಡಿತೋಽಥ ವಾ ॥೧೮೬॥**

ಲಗ್ನಾರೂಢದಿಂದ ಸಪ್ತಮದಲ್ಲಿ ರಾಹು ಅಥವಾ ಕೇತು ಇದ್ದರೆ ಬಾಲ್ಯ ಪ್ರಾಯದಲ್ಲಿ ಉದರ ವ್ಯಾಧಿಯಿಂದ ಪೀಡಿಸಲ್ಪಡುತ್ತಾನೆ ಅಥವಾ ಬೆಂಕಿಯಿಂದ ಪೀಡಿಸಲ್ಪಡುತ್ತಾನೆ, ಅಥವಾ ಬಾಲಗ್ರಹಪೀಡೆ ಇರುತ್ತದೆ.

**ಪದಾತ್ತು ಸಪ್ತಮೇ ಸ್ಥಾನೇ ಗುರು ಶುಕ್ರ ನಿಶಾಕರಃ । ತ್ರಯೋ ದ್ವಯ ಮಥೈಕೋಽಪಿ ಲಕ್ಷ್ಮೀವಾನ್ ಜಾಯತೇ ಜನಃ ॥೧೮೭॥**

ಲಗ್ನಪದದಿಂದ ಸಪ್ತಮದಲ್ಲಿ ಗುರು, ಶುಕ್ರ, ಚಂದ್ರರಿದ್ದರೆ ಅತ್ಯಂತ ಧನಿಕನಾಗುವನು. ಮೂರು ಗ್ರಹರಲ್ಲಿ ಇಬ್ಬರು ಅಥವಾ ಒಬ್ಬನಿದ್ದರೂ ಶ್ರೀ ಮಂತನು ಆಗುತ್ತಾನೆ.

**ಆರೂಢಾತ್ ವಿತ್ತಭೇ ಸೌಮ್ಯೇ ಸರ್ವದೇಶಾಧಿಪೋ ಭವೇತ್ ।**
**ಸರ್ವಜ್ಞೋ ಯದಿ ವಾ ಸ ಸ್ಯಾತ್ ಕವಿರ್ವಾದೀ ಚ ಭಾರ್ಗವೇ ॥**

ಲಗ್ನಾರೂಢ ಪದದಿಂದ ದ್ವಿತೀಯದಲ್ಲಿ ಶುಭ ಗ್ರಹರಿದ್ದರೆ ರಾಜ ಅಥವಾ ರಾಜತುಲ್ಯ ಅಥವಾ ಸಕಲ ಜ್ಞಾನಗಳಿಂದ ಕೂಡಿದವನಾಗುತ್ತಾನೆ. ಶುಕ್ರನಿದ್ದರೆ ಕವಿ ಅಥವಾ ತಾರ್ಕಿಕನು ಆಗುತ್ತಾನೆ.

**ಆರೂಢಾತ್ ಕೇಂದ್ರಕೋಣೇಷು ಸ್ಥಿತೇ ದಾರಪದೇ ದ್ವಿಜ! ।**
**ಲಗ್ನಜಾಯಾಪದೇ ವಾಪಿ ಸಬಲಗ್ರಹಸಂಯುತೇ ॥೧೮೯॥**

**ಶ್ರೀಮಾಂಶ್ಚ ಜಾಯತೇ ನೂನಂ ದೇಶೇ ವಿಖ್ಯಾತಿಮಾನ್ ಭವೇತ್ ।**
**ಷಷ್ಠೇಷ್ಟಮೇ ವ್ಯಯಸ್ಥಾನೇ ಜಾತೋ ದಾರಪದೇಽಧನಃ ॥೧೯೦॥**

ಲಗ್ನಾರೂಢ ರಾಶಿಯಿಂದ ಕೇಂದ್ರ ತ್ರಿಕೋಣಗಳಲ್ಲಿ ಸಪ್ತಮ ಪದವಿದ್ದರೆ ಅಥವಾ ಉಭಯ ಪದಗಳಲ್ಲಿ ಬಲಿಷ್ಠ ಗ್ರಹರಿದ್ದರೆ ಜಾತಕನು ಶ್ರೀಮಂತನು, ಖ್ಯಾತಿವಂತನು, ಆಗುತ್ತಾನೆ. ಸಪ್ತಮ ಪದವು ಲಗ್ನಪದದಿಂದ ಷಷ್ಠ ಅಷ್ಟಮ, ದ್ವಾದಶಗಳಲ್ಲಿದ್ದರೆ ಜಾತಕನು ನಿರ್ಧನನು ಆಗುತ್ತಾನೆ.

## ೪೫. ಆತ್ಮಕಾರಕ ಗ್ರಹಶೋಧನೆ

**ಆತ್ಮಾ ಸೂರ್ಯಾದಿ ಖೇಟಾನಾಂ ಮಧ್ಯೇ ಹ್ಯಂಶಾಧಿಕೋ ಗ್ರಹಃ।**
**ಅಂಶಸಾಮ್ಯೇ ಕಲಾಧಿಕ್ಯಾತ್ ತತ್ಸಾಮ್ಯೇ ವಿಕಲಾಧಿಕಃ ॥೧೯೧॥**

ಗ್ರಹಸ್ಫುಟದಲ್ಲಿ ಅತ್ಯಧಿಕ ಅಂಶವನ್ನು ಅನುಭವಿಸಿದ ಗ್ರಹನು, ಅಂಶಸಾಮ್ಯವಿದ್ದರೆ ಅಧಿಕ ಕಲೆಗಳಲ್ಲಿ ಮುಂದುವರಿದ ಗ್ರಹನು ಆತ್ಮಕಾರಕನು ಆಗುತ್ತಾನೆ.

ಜನನ ಕಾಲದಲ್ಲಿ ಸೂರ್ಯಾದಿ ಸಪ್ತ ಗ್ರಹರು ಮತ್ತು ರಾಹುವನ್ನು ಸೇರಿಸಿ ಎಂಟು ಗ್ರಹರಲ್ಲಿ ಅಧಿಕಭಾಗ ಕಲೆ, ಮತ್ತು ವಿಕಲೆಗಳನ್ನು, ತಾನು ಸ್ಥಿತರಾಶಿಯಲ್ಲಿ ಅನುಭವಿಸಿದ ಗ್ರಹನನ್ನು ಆತ್ಮಕಾರಕನು ಎಂದು ಕರೆಯುತ್ತಾರೆ ರಾಹುವು ವಿರುದ್ಧ ದಿಕ್ಕಿನಲ್ಲಿ ಚಲಿಸುವುದರಿಂದ ರಾಹುಸ್ಫುಟವನ್ನು 30 ಭಾಗಗಳಿಂದ ಕಳೆದು ಬಂದ ಸ್ಫುಟವನ್ನು ಗಣನೆಗೆ ತೆಗೆದುಕೊಳ್ಳಬೇಕು.

ಉದಾಹರಣೆಯ ಜಾತಕದಲ್ಲಿ ಶನಿಯು ಮೇಷ ರಾಶಿಯಲ್ಲಿ 27 ಭಾಗ 22 ಕಲೆ 22 ವಿಕಲೆಗಳನ್ನು ಅನುಭವಿಸಿರುತ್ತಾನೆ. ಇತರ ಗ್ರಹರಿಗಿಂತ ಶನಿಯು ಅಧಿಕ ಭಾಗಾದಿಗಳನ್ನು ಅನುಭವಿಸಿರುವುದರಿಂದ ಈ ಜಾತಕನಿಗೆ ಶನಿ ಆತ್ಮಕಾರಕನು ಆಗುತ್ತಾನೆ.

ಆತ್ಮಕಾರಕನು ಸಕಲ ಗ್ರಹರಿಗೆ ಒಡೆಯನು, ಹಾಗೂ ಅವನ ಪ್ರಭಾವವು ಜಾತಕನ ಮೇಲೆ ಅಧಿಕವಾಗಿರುತ್ತದೆ ಹಾಗೂ ಸಕಲ ಸಂಕಷ್ಟಗಳನ್ನು ನಾಶಮಾಡಿ, ಜಾತಕನ ಅಭ್ಯುದಯಕ್ಕೆ ಕಾರಣೀಭೂತನಾಗುತ್ತಾನೆ.

## ೪೬. ಆತ್ಮಕಾರಕ ಗ್ರಹನ ಅಂಶಫಲ

**ಗ್ರಹೇ ಮೂಷಕ ಮಾರ್ಜಾರಾ ಮೇಷಾಂಶೇ ಹ್ಯಾತ್ಮಕಾರಕೇ ।**
**ಸದಾ ಭಯಪ್ರದಾ ವಿಪ್ರ! ಪಾಪಯುಕ್ತೇ ವಿಶೇಷತಃ ॥೧೯೨॥**
**ವೃಷಾಂಶಕಗತೇ ಸ್ವಸ್ಮಿನ್ ಸುಖದಾಶ್ಚ ಚತುಷ್ಪದಾಃ ।**
**ಮಿಥುನಾಂಶಗತೇ ತಸ್ಮಿನ್ ಕಂಡ್ವಾದಿ ವ್ಯಾಧಿಸಂಭವಃ ॥೧೯೩॥**

ಆತ್ಮಕಾರಕನು ಮೇಷನವಾಂಶದಲ್ಲಿದ್ದರೆ ಜಾತಕನ ಗೃಹದಲ್ಲಿ ಇಲಿ, ಬೆಕ್ಕುಗಳ ಕಾಟ ಹೂಗೂ ಜಾತಕನಿಗೆ ಅವುಗಳಿಂದ ಯಾವಾಗಲೂ ಭಯ

ಇರುತ್ತದೆ. ಆತ್ಮಕಾರಕನು ಪಾಪಗ್ರಹನಿಂದ ಕೂಡಿದ್ದರೆ ಅಧಿಕವಾಗಿ ಇಲಿ, ಬೆಕ್ಕುಗಳಿಂದ ಪೀಡಿಸಲ್ಪಡುತ್ತಾನೆ.

ಆತ್ಮಕಾರಕನು ವೃಷಭರಾಶಿಯ ನವಾಂಶದಲ್ಲಿ ಇದ್ದರೆ ಜಾತಕನಿಗೆ ಚತುಷ್ಪಾದ ಪ್ರಾಣಿಗಳಿಂದ ಸುಖ ಲಭಿಸುತ್ತದೆ.

ಆತ್ಮಕಾರಕನು ಮಿಥುನರಾಶಿಯ ನವಾಂಶದಲ್ಲಿ ಇದ್ದರೆ ಜಾತಕನಿಗೆ ಕಜ್ಜಿ (ತುರಿಕೆ) ಮೊದಲಾದ ಚರ್ಮವ್ಯಾಧಿಗಳು ಸಂಭವಿಸುತ್ತದೆ.

**ಕರ್ಕಾಂಶೇ ಚ ಜಲಾದ್ ಭೀತಿಃ ಸಿಂಹಾಂಶೇ ಶ್ವಪದಾದ್ಭಯಮ್ ।**
**ಕಂಡೂಃ ಸ್ಥೌಲ್ಯಂಚ ಕನ್ಯಾಂಶೇ ತಥಾ ವಹ್ನಿಕಣಾದ್ಭಯಮ್ ॥**

ಆತ್ಮಕಾರಕನು ಕರ್ಕಟಕರಾಶಿಯ ನವಾಂಶದಲ್ಲಿ ಇದ್ದರೆ ಜಾತಕನಿಗೆ ನೀರಿನಿಂದ ಭಯ ಉಂಟಾಗುತ್ತದೆ.

ಆತ್ಮಕಾರಕನು ಸಿಂಹರಾಶಿಯ ನವಾಂಶದಲ್ಲಿ ಇದ್ದರೆ ಜಾತಕನಿಗೆ ನಾಯಿ ಮೊದಲಾದ ಪ್ರಾಣಿಗಳ ಭಯ ಇರುತ್ತದೆ.

ಆತ್ಮಕಾರಕನು ಕನ್ಯಾರಾಶಿಯ ನವಾಂಶದಲ್ಲಿ ಇದ್ದರೆ ಜಾತಕನಿಗೆ ತುರಿಕೆ, ಸ್ಥೂಲತ್ವಹಾಗೂ ಅಗ್ನಿಯಿಂದ ಹಾನಿಯ ಭಯ ಇರುತ್ತದೆ.

**ತುಲಾಂಶೇ ಚ ವಣಿಗ್ ಜಾತೋ ವಸ್ತ್ರಾದಿ ನಿರ್ಮಿತೌ ಪಟುಃ ।**
**ಅಲ್ಯಂಶೇ ಸರ್ಪತೋ ಭೀತಿಃ ಪೀಡಾಮಾತುಃ ಪಯೋಧರೇ ॥ ೧೯೫ ॥**

ಆತ್ಮಕಾರಕನು ತುಲಾರಾಶಿಯ ನವಾಂಶದಲ್ಲಿ ಇದ್ದರೆ ಜಾತಕನು ವ್ಯಾಪಾರಿಯು, ವಸ್ತ್ರಾದಿಗಳನ್ನು ತಯಾರಿಸುವವನು ಆಗುತ್ತಾನೆ.

ಆತ್ಮಕಾರಕನು ವೃಶ್ಚಿಕರಾಶಿಯ ನವಾಂಶದಲ್ಲಿ ಇದ್ದರೆ ಸರ್ಪದ ಭಯ ಮತ್ತು ತಾಯಿಯ ಸ್ತನಗಳಲ್ಲಿ ವೇದನೆ ಇರುತ್ತದೆ.

**ಧನುರಂಶೇ ಕ್ರಮಾದುಚ್ಚಾತ್ ಪತನಂ ವಾಹನಾದಪಿ ।**

ಆತ್ಮಕಾರಕನು ಧನುರಾಶಿಯ ನವಾಂಶದಲ್ಲಿ ಇದ್ದರೆ ಜಾತಕನು ಉನ್ನತ ಸ್ಥಾನದಿಂದ ಅಥವಾ ವಾಹನದಿಂದ ಬೀಳುತ್ತಾನೆ.

**ಮಕರಾಂಶೇ ಜಲೋದ್ ಭೂತ್ಯೈರ್ಜಂತುಭಿಃ ಖೇಚರಸ್ತಥಾ ।**
**ಶಂಕಮುಕ್ತಾ ಪ್ರವಾಲಾದ್ಯೈರ್ಲಾಭೋ ಭವತಿ ನಿಶ್ಚಿತಃ ॥೧೯೬॥**

ಆತ್ಮಕಾರಕನು ಮಕರರಾಶಿಯ ನವಾಂಶದಲ್ಲಿ ಇದ್ದರೆ ಜಲಜೀವಿಗಳಿಂದ, ಪಕ್ಷಿಗಳಿಂದ ಶಂಖ, ಮುತ್ತು ಹವಳ ಮೊದಲಾದವುಗಳಿಂದ ನಿಶ್ಚಯವಾಗಿ ಲಾಭ ಗಳಿಸುತ್ತಾನೆ.

**ಕುಂಭಾಂಶೇ ಚ ತಡಾಗಾದಿ-ಕಾರಕೋ ಜಾಯತೇ ಜನಃ ॥೧೯೭॥**

ಆತ್ಮಕಾರಕನು ಕುಂಭರಾಶಿಯ ನವಾಂಶದಲ್ಲಿ ಇದ್ದರೆ ಜಾತಕನು ಕೆರೆ, ಸರೋವರ, ಇತ್ಯಾದಿ ತೋಡಿಸುವವನು ಆಗುತ್ತಾನೆ.

**ಮೀನಾಂಶೇ ಕಾರಕೇ ಜಾತೋ ಮುಕ್ತಿಭಾಗ್ ದ್ವಿಜಸತ್ತಮ!**
**ನಾಽಶುಭಂ ಶುಭಸಂದೃಷ್ಟೇ ನ ಶುಭಂ ಪಾಪವೀಕ್ಷಿತೇ ॥೧೯೮॥**

ಆತ್ಮಕಾರಕನು ಮೀನ ರಾಶಿಯ ನವಾಂಶದಲ್ಲಿ ಇದ್ದರೆ ಜಾತಕನು ಮುಕ್ತಿಯನ್ನು ಹೊಂದುತ್ತಾನೆ.

ಆತ್ಮಕಾರಕನನ್ನು ಶುಭಗ್ರಹರು ನೋಡಿದರೆ ಅಶುಭ ಫಲಗಳ ನಾಶ ಸಂಭವಿಸುತ್ತದೆ. ಪಾಪಗ್ರಹರು ನೋಡಿದರೆ ಶುಭಫಲಗಳು ಇರುವುದಿಲ್ಲ.

## ೪೭. ಆತ್ಮಕಾರಕನ ಅಂಶಸ್ಥಿತ ಗ್ರಹಫಲ

**ಕಾರಕಾಂಶೇ ರವೌ ಜಾತೋ ರಾಜಕಾರ್ಯಪರೋ ದ್ವಿಜ! ।**
**ಪೂರ್ಣೇಂದೌ ಭೋಗವಾನ್ ವಿದ್ವಾನ್ ಶುಕ್ರದೃಷ್ಟೇ ವಿಶೇಷತಃ ॥**

ಆತ್ಮಕಾರಕ ನವಾಂಶದಲ್ಲಿ ರವಿ ಇದ್ದರೆ (ನವಾಂಶ ಕುಂಡಲಿಯಲ್ಲಿ ಆತ್ಮಕಾರಕನ ಯುತಿಯಲ್ಲಿದ್ದರೆ) ಜಾತಕನು ರಾಜಕಾರ್ಯದಲ್ಲಿ ನಿರತನಾದವನು ಆಗುತ್ತಾನೆ.

ಆತ್ಮಕಾರಕನ ನವಾಂಶದಲ್ಲಿ ಪೂರ್ಣ ಚಂದ್ರನಿದ್ದರೆ ಭೋಗವಂತನು, ವಿದ್ಯಾವಂತನು ಆಗುತ್ತಾನೆ. ಶುಕ್ರ ದೃಷ್ಟಿ ಇದ್ದರೆ ಅತ್ಯಂತ ಭೋಗವಂತನು, ವಿದ್ಯಾವಂತನು ಆಗುತ್ತಾನೆ.

**ಸ್ವಾಂಶೇ ಬಲಯುತೇ ಭೌಮೇ ಜಾತಃ ಕುಂತಾಯುಧೀ ಭವೇತ್ ।**
**ವಹ್ನಿಜೀವೀ ನರೋವಾಪಿ ರಸವಾದೀ ಚ ಜಾಯತೇ ॥ ೨೦೦ ॥**

ಆತ್ಮಕಾರಕ ನವಾಂಶದಲ್ಲಿ ಬಲಿಷ್ಟನಾದ ಕುಜನಿದ್ದರೆ ಜಾತಕನು ಆಯುಧಗಳನ್ನು ಧರಿಸುವವನು, ಅಗ್ನಿಯಿಂದ ಜೀವಿಸುವವನು, ಅಥವಾ ರಸಾಯನ ಶಾಸ್ತ್ರಜ್ಞನು ಆಗುತ್ತಾನೆ.

**ಬುಧೇ ಬಲಯುತೇ ಸ್ವಾಂಶೇ ಕಲಾಶಿಲ್ಪ ವಿಚಕ್ಷಣಃ ।**
**ವಾಣಿಜ್ಯ ಕುಶಲಶ್ಚಾಪಿ ಬುದ್ಧಿ-ವಿದ್ಯಾ ಸಮನ್ವಿತಃ ॥ ೨೦೧ ॥**

ಆತ್ಮಕಾರಕ ನವಾಂಶದಲ್ಲಿ ಬಲಿಷ್ಟನಾದ ಬುಧನಿದ್ದರೆ ಚಿತ್ರಕಲೆ ಅಥವಾಶಿಲ್ಪಕಲೆಯಲ್ಲಿ ಪ್ರವೀಣನು, ವ್ಯಾಪಾರದಲ್ಲಿ ಕುಶಲನು, ವಿದ್ಯೆ ಮತ್ತು ಬುದ್ಧಿಗಳಿಂದ ಕೂಡಿದವನು ಆಗುತ್ತಾನೆ.

**ಸುಕರ್ಮಾ ಜ್ಞಾನನಿಷ್ಠಶ್ಚ ವೇದವಿತವ ಸ್ವಾಂಶಗೇ ಗುರೌ ।**
**ಶುಕ್ರೇ ಶತೇಂದ್ರಿಯಃ ಕಾಮೀ ರಾಜಕೀಯೋ ಭವೇನ್ನರಃ ॥ ೨೦೨ ॥**

ಆತ್ಮಕಾರಕ ನವಾಂಶದಲ್ಲಿ ಗುರು ಇದ್ದರೆ ಜಾತಕನು ಸತ್ಕರ್ಮಗಳನ್ನು ಮಾಡುವವನು, ಜ್ಞಾನಿಯು ಆಗುತ್ತಾನೆ.

ಆತ್ಮಕಾರಕ ನವಾಂಶದಲ್ಲಿ ಶುಕ್ರನಿದ್ದರೆ ಜಾತಕನು ಕಾಮಿಯು, ರಾಜಕಾರಣಿಯು ಆಗುತ್ತಾನೆ.

**ಶನೌ ಸ್ವಾಂಶಗತೇ ಜಾತಃ ಸ್ವಕುಲೋಚಿತ ಕರ್ಮಕೃತ್ ।**
**ರಾಹೌ ಚೌರಶ್ಚ ಧಾನುಷ್ಕೋ ಜಾತೋ ವಾ ಲೋಹಯಂತ್ರಕೃತ್**

**ವಿಷ್ವೈದ್ಯೋಽಥವಾ ವಿಪ್ರ! ಜಾಯತೇ ನಾತ್ರ ಸಂಶಯಃ ।**
**ವ್ಯವಹಾರೀ ಗಜಾದೀನಾಂ ಕೇತೌ ಚೌರಶ್ಚ ಜಾಯತೇ ॥ ೨೦೪ ॥**

ಆತ್ಮಕಾರಕ ನವಾಂಶದಲ್ಲಿ ಶನಿಯು ಇದ್ದರೆ ಜಾತಕನು ತನ್ನ ಕುಲಕ್ಕೆ ಅನುಚಿತವಾದ ಕರ್ಮಗಳನ್ನು ಮಾಡುತ್ತಾನೆ.

ಆತ್ಮಕಾರಕ ನವಾಂಶದಲ್ಲಿ ರಾಹು ಇದ್ದರೆ ಜಾತಕನು ಚೋರನು, ಧನುರ್ಧಾರಿಯು, ಲೋಹದ ಅಥವಾ ಯಂತ್ರದ ಕಾರ್ಯಗಳನ್ನು ಮಾಡುವವನು ಆಗುತ್ತಾನೆ. ಅಥವಾ ನಿಃಸಂಶಯವಾಗಿ ವಿಷ ವೈದ್ಯನು ಆಗುತ್ತಾನೆ.

ಆತ್ಮಕಾರಕ ನವಾಂಶದಲ್ಲಿ ಕೇತು ಇದ್ದರೆ ಆನೆಯ ವ್ಯಾಪಾರ ವ್ಯವಹಾರ ಮಾಡುತ್ತಾನೆ, ಅಥವಾ ಚೋರ ವೃತ್ತಿಯನ್ನು ಮಾಡುವವನು ಆಗುತ್ತಾನ.

**ರವಿ ರಾಹು ಯದಾಸ್ವಾಂಶೇ ಸರ್ಪಾದ್‌ಭೀತಿ: ಪ್ರಜಾಯತೇ ।**
**ಶುಭದೃಷ್ಟೌ ಭಯಂ ನೈವ ಪಾಪದೃಷ್ಟೌ ಮೃತಿರ್ಭವೇತ್ ॥ ೨೦೫ ॥**

ಆತ್ಮಕಾರಕ ನವಾಂಶದಲ್ಲಿ ರವಿ ಮತ್ತು ರಾಹು ಇದ್ದರೆ ಜಾತಕನಿಗೆ ಸರ್ಪದಿಂದ ಭಯ ಇರುತ್ತದೆ. ಶುಭದೃಷ್ಟಿ ಇದ್ದರೆ ಸರ್ಪ ಭಯ ಇರುವುದಿಲ್ಲ. ಪಾಪದೃಷ್ಟಿ ಇದ್ದರೆ ಸರ್ಪದಿಂದ ಮರಣ ಸಂಭವಿಸುತ್ತದೆ.

**ಶುಭಷಡ್ವರ್ಗ ಸಂಯುಕ್ತೌ ವಿಷವೈದ್ಯೋ ಭವೇತ್ ತದಾ ।**

ಆತ್ಮಕಾರಕ ನವಾಂಶದಲ್ಲಿ ಸ್ಥಿತ ರವಿ-ರಾಹುಗಳು ಶುಭಗ್ರಹರ ಷಡ್ವರ್ಗದಲ್ಲಿದ್ದರೆ ಜಾತಕನು ವಿಷವೈದ್ಯನು ಆಗುತ್ತಾನೆ.

**ಭೌಮೇಕ್ಷಿತೇ ಕಾರಕಾಂಶೇ ಭಾನುಸ್ವರ್ಭಾನು ಸಂಯುತೇ ॥**

**ಅನ್ಯಗ್ರಹಾ ನ ಪಶ್ಯಂತಿ ಸ್ವವೇಶ್ಮ ಪರದಾಹಕಃ ।**
**ತಸ್ಮಿನ್ ಬುಧೇಕ್ಷಿತೇ ಚಾಪಿ ವಹ್ನಿದೋ ನೈವ ಜಾಯತೇ ॥ ೨೦೭ ॥**

ಆತ್ಮಕಾರಕ ನವಾಂಶದಲ್ಲಿ ಸ್ಥಿತ ರವಿ ರಾಹುಗಳನ್ನು ಕುಜನು ಮಾತ್ರ ನೋಡಿದರೆ ಸ್ವಗೃಹ ಅಥವಾ ಪರರ ಗ್ರಹಕ್ಕೆ ಬೆಂಕಿಯನ್ನು ಕೊಡುತ್ತಾನೆ.

ಈ ಯೋಗದಲ್ಲಿ ಬುಧನ ದೃಷ್ಟಿ ಇದ್ದರೆ ಗ್ರಹಕ್ಕೆ ಬೆಂಕಿ ಇಡುವುದಿಲ್ಲ.

**ಪಾಪರ್ಕ್ಷೇ ಗುರುಣಾ ದೃಷ್ಟೇ ಸಮೀಪಗ್ರಹದಾಪಕಃ ।**
**ಶುಕ್ರದೃಷ್ಟೇತು ವಿಪ್ರೇಂದ್ರ! ಗೃಹದಾಹೋ ನ ಜಾಯತೇ ॥ ೨೦೮ ॥**

ಆತ್ಮಕಾರಕ ನವಾಂಶದಲ್ಲಿ ಸ್ಥಿತ ರವಿ, ರಾಹುಗಳು ಪಾಪವರ್ಗದಲ್ಲಿದ್ದರೆ ಗುರು ದೃಷ್ಟವಾದರೆ ಜಾತಕನು ನೆರೆಮನೆಗೆ ಬೆಂಕಿ ಇಡುತ್ತಾನೆ. ಆದರೆ ಶುಕ್ರ ದೃಷ್ಟಿ ಇದ್ದರೆ ಬೆಂಕಿ ಇಡುವುದಿಲ್ಲ.

**ಗುಲಿಕೇನ ಯುತೇ ಸ್ವಾಂಶೇ ಪೂರ್ಣ ಚಂದ್ರೇಣ ವೀಕ್ಷಿತೇ ।**
**ಚೌರೈಹೃತಧನೋ ಜಾತ: ಸ್ವಯಂ ಚೋರೋಽಥವಾ ಭವೇತ್ ॥**

ಆತ್ಮಕಾರಕ ನವಾಂಶದಲ್ಲಿ ಗುಳಿಕನಿದ್ದು ಪೂರ್ಣ ಚಂದ್ರನಿಂದ ನೋಡಲ್ಪಟ್ಟರೆ, ಜಾತಕನ ಧನವು ಕಳ್ಳರಿಂದ ಅಪಹರಿಸಲ್ಪಡುತ್ತದೆ, ಅಥವಾ ಜಾತಕನು ಸ್ವತಃ ಕಳ್ಳನು ಆಗಿರುತ್ತಾನೆ.

**ಗ್ರಹಾದೃಷ್ಟೇ ಸಗುಲಿಕೇ ವಿಷದೋ ವಾ ವಿಷೈರ್ಹತಃ ।**
**ಬುಧದೃಷ್ಟೇ ಬೃಹದ್ ಬೀಜೋ ಜಾಯತೇನಾऽತ್ರ ಸಂಶಯಃ ॥**

ಆತ್ಮಕಾರಕ ನವಾಂಶದಲ್ಲಿದ್ದ ಗುಳಿಕನನ್ನು ಯಾವ ಗ್ರಹನೂ ನೋಡದೇ ಇದ್ದರೆ ಜಾತಕನು ವಿಷವನ್ನು ಕೊಡುವವನು, ಅಥವಾ ವಿಷದಿಂದ ಮರಣವನ್ನು ಹೊಂದುವವನು ಆಗುತ್ತಾನೆ.

ಆತ್ಮಕಾರಕನವಾಂಶದಲ್ಲಿದ್ದ ಗುಳಿಕನನ್ನು ಬುಧನು ನೋಡಿದರೆ ಜಾತಕನಿಗೆ ಅಂತ್ರವೃದ್ಧಿ ಉಂಟಾಗುತ್ತದೆ.

**ಸ ಕೇತೌ ಕಾರಕಾಂಶೇ ಚ ಪಾಪದೃಷ್ಟೇ ದ್ವಿಜೋತ್ತಮ! ।**
**ಜಾತಸ್ಯ ಕರ್ಣರೋಗೋ ವಾ ಕರ್ಣಚ್ಛೇದಃ ಪ್ರಜಾಯತೇ ॥೨೧೧॥**

ಆತ್ಮಕಾರಕ ನವಾಂಶ ಸ್ಥಿತಕೇತುವು ಪಾಪದೃಷ್ಟನಾದರೆ ಜಾತಕನಿಗೆ ಕಿವಿ ರೋಗಗಳು ಉಂಟಾಗುತ್ತವೆ. ಅಥವಾ ಕಿವಿ ತುಂಡಾಗುತ್ತದೆ.

**ಭೃಗು ಪುತ್ರೇಕ್ಷಿತೇ ತಸ್ಮಿನ್ ದೀಕ್ಷಿತೋ ಜಾಯತೇ ಜನಃ ।**

ಆತ್ಮಕಾರಕ ನವಾಂಶ ಸ್ಥಿತ ಕೇತುವನ್ನು ಶುಕ್ರನು ನೋಡಿದರ ಜಾತಕನು ಸಂನ್ಯಾಸಿ ಆಗುತ್ತಾನ.

**ಬುಧಾರ್ಕಿದೃಷ್ಟೇ ನಿರ್ವೀರ್ಯೋ ಜಾಯತೇ ಮಾನವೋಧ್ರುವಮ್**

ಆತ್ಮಕಾರಕನವಾಂಶಸ್ಥಿತ ಕೇತುವನ್ನು ಬುಧ ಮತ್ತು ಶನಿಯು ನೋಡಿದರ ಜಾತಕನು ನಿರ್ವೀರ್ಯನು ಆಗುತ್ತಾನೆ.

**ಬುಧ ಶುಕ್ರೇಕ್ಷಿತೇ ತಸ್ಮಿನ್ ದಾಸೀಪುತ್ರ: ಪ್ರಜಾಯತೇ ।**
**ಪುನರ್ಭವಾಸುತೋ ವಾಪಿ ಜಾಯತೇ ನಾತ್ರ ಸಂಶಯ: ॥೨೧೩॥**

ಆತ್ಮಕಾರಕನವಾಂಶ ಸ್ಥಿತ ಕೇತುವನ್ನು ಬುಧ ಮತ್ತು ಶುಕ್ರನು ನೋಡಿದರೆ ಜಾತಕನು ದಾಸೀಪುತ್ರ ಅಥವಾ ಪುನರ್ಭೂ (ದ್ವಿತೀಯ ವಿವಾಹವಾದವಳು) ಪುತ್ರನಾಗುತ್ತಾನೆ.

**ತಪಸ್ವೀ ಶನಿನಾ ದೃಷ್ಟೇ ಜಾತಃ ಪ್ರೇಷ್ಯೋಥವಾ ಭವೇತ್ ।
ಶನಿಮಾತ್ರೇಕ್ಷಿತೇ ತಸ್ಮಿನ್ ಜಾತಃ ಸಂನ್ಯಾಸಿ ವೇಷವಾನ್ ॥ ೨೧೪ ॥**

ಆತ್ಮಕಾರಕಾಂಶ ಸ್ಥಿತ ಕೇತುವನ್ನು ಶನಿಯು ನೋಡಿದರೆ ಜಾತಕನು ತಪಸ್ವಿಯು ಆಗುತ್ತಾನೆ, ಅಥವಾ ಸೇವಕನು ಆಗುತ್ತಾನೆ, ಆತ್ಮಕಾರಕ ನವಾಂಶ ಸ್ಥಿತ ಕೇತುವನ್ನು ಕೇವಲ ಶನಿ ಒಬ್ಬನೇ ನೋಡಿದರೆ ಜಾತಕನು ಸಂನ್ಯಾಸಿ ವೇಷ ಧರಿಸಿದವನು ಆಗುತ್ತಾನೆ.

**ರವಿ ಶುಕ್ರೇಕ್ಷಿತೇ ತಸ್ಮಿನ್ ರಾಜಪ್ರೇಷ್ಯೋ ಜನೋ ಭವೇತ್ ।
ಇತಿ ಸಂಕ್ಷೇಪತಃ ಪ್ರೋಕ್ತಂ ಕಾರಕಾಂಶ ಫಲಂ ದ್ವಿಜ! ॥ ೨೧೫ ॥**

ಆತ್ಮಕಾರಕ ನವಾಂಶಸ್ಥಿತ ಕೇತುವನ್ನು ರವಿ ಮತ್ತು ಶುಕ್ರನು ನೋಡಿದರೆ ಜಾತಕನು ರಾಜಸೇವೆಯಲ್ಲಿ ಇರುವವನು ಆಗುತ್ತಾನೆ. ಈ ರೀತಿ ಕಾರಕಾಂಶ ಫಲವನ್ನು ಸಂಕ್ಷಿಪ್ತವಾಗಿ ಹೇಳಿರುತ್ತದೆ.

## ೪೮. ಕಾರಕಾಂಶದಿಂದ ದ್ವಿತೀಯಾದಿ ಭಾವಸ್ಥಿತ ಗ್ರಹಫಲ

**ಸ್ವಾಂಶಾದ್ಧನೇ ಚ ಶುಕ್ರಾರ ವರ್ಗೇ ಸ್ಯಾತ್ ಪಾರದಾರಿಕಃ ।
ತಯೋರ್ದೃಗ್ ಯೋಗತೋ ಜ್ಞೇಯಮಿದಮಾಮರಣಂ ಫಲಮ್ ॥**

ಕಾರಕಾಂಶದಿಂದ ದ್ವಿತೀಯದಲ್ಲಿ ಶುಕ್ರ ಕುಜರ ಷಡ್ವರ್ಗಗಳಿದ್ದರೆ ಜಾತಕನು ಪರಸ್ತ್ರೀಯರಲ್ಲಿ ಆಸಕ್ತನಾಗುತ್ತಾನೆ. ಶುಕ್ರ ಕುಜರ ಷಡ್ವರ್ಗದಲ್ಲಿದ್ದ ಈ ದ್ವಿತೀಯ ಭಾವವನ್ನು ಶುಕ್ರ ಕುಜರು ನೋಡಿದರೆ ಜಾತಕನು ಅಂತ್ಯ ಕಾಲದ ವರೆಗೆ ಪರಸ್ತ್ರೀಯರಲ್ಲಿ ಆಸಕ್ತನಾಗುತ್ತಾನೆ.

**ಕೇತೌ ತತ್ಪ್ರತಿ ಬಂಧಃ ಸ್ಯಾದ್ ಗುರೌ ತು ಸ್ತ್ರೈಣ ಏವ ಸಃ ।
ರಾಹೌ ಚಾರ್ಥನಿವೃತ್ತಿಃ ಸ್ಯಾತ್ ಕಾರಕಾಂಶದ್ ದ್ವಿತೀಯಗೇ ॥**

ನವಾಂಶ ಕುಂಡಳಿಯಲ್ಲಿ ಆತ್ಮಕಾರಕನಿಂದ ದ್ವಿತೀಯದಲ್ಲಿ ಕೇತು ಅಥವಾ ಗುರು ಇದ್ದರೆ ಮೇಲಿನ ಯೋಗ ನಿಷ್ಫಲ ಆಗುತ್ತದೆ.

ಕಾರಕಾಂಶದಿಂದ ದ್ವಿತೀಯದಲ್ಲಿ ರಾಹು ಇದ್ದರೆ ಪರಸ್ತ್ರೀ ನಿಮಿತ್ತ ಧನ ಹಾನಿ ಸಂಭವಿಸುತ್ತದೆ.

**ಕಾರಕಾಂಶದಿಂದ ತೃತೀಯಸ್ಥಿತ ಗ್ರಹಫಲ:-**

**ಸ್ವಾಂಶಾತ್ ತೃತೀಯಗೇ ಪಾಪೇ ಜಾತ: ಶೂರ: ಪ್ರತಾಪವಾನ್ ।**
**ತಸ್ಮಿನ್ ಶುಭಗ್ರಹೇ ಜಾತ: ಕಾತರೋ ನಾತ್ರ ಸಂಶಯ: ॥ ೨೧೮ ॥**

ಕಾರಕಾಂಶದಿಂದ ತೃತೀಯದಲ್ಲಿ ಪಾಪಗ್ರಹರಿದ್ದರೆ ಜಾತಕನು ಶೂರನು, ಪ್ರತಾಪವಂತನು ಆಗುತ್ತಾನೆ. ಶುಭಗ್ರಹರಿದ್ದರೆ ಭಯದಿಂದ ಕೂಡಿದವನು ಆಗುತ್ತಾನೆ.

**ಕಾರಕಾಂಶದಿಂದ ಚತುರ್ಥಸ್ಥಿತ ಗ್ರಹಫಲ:-**

**ಸ್ವಾಂಶಾತ್ ಚತುರ್ಥ ಭಾವೇ ತು ಚಂದ್ರಶುಕ್ರಯುತೇಕ್ಷಿತೇ ।**
**ತತ್ರ ವಾ ಸ್ವೋಚ್ಚಗೇ ಖೇಟೇ ಜಾತ: ಪ್ರಾಸಾದವಾನ್ ಭವೇತ್ ॥**

ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರ ಶುಕ್ರರ ಯೋಗ ಅಥವಾ ದೃಷ್ಟಿ ಇದ್ದರೆ ಅಥವಾ ಉಚ್ಚಗ್ರಹವಿದ್ದರೆ ಜಾತಕನಿಗೆ ಎತ್ತರವಾದ ಕಟ್ಟಡದ ಮನೆ ಪ್ರಾಪ್ತವಾಗುತ್ತದೆ.

**ಶನಿರಾಹು ಯುತೇ ತಸ್ಮಿನ್ ಜಾತಸ್ಯ ಚ ಶಿಲಾಗೃಹಮ್ ।**
**ಐಷ್ಟಿಕಂ ಕುಜ ಕೇತುಭ್ಯಾಂ ಗುರುಣಾ ದಾರವಂ ಗೃಹಮ್ ॥ ೨೨೦ ॥**

ಕಾರಕಾಂಶದಿಂದ ಚತುರ್ಥದಲ್ಲಿ ಶನಿ ರಾಹುಗಳಿದ್ದರೆ ಜಾತಕನಿಗ ಶಿಲಾಗೃಹ ಲಭಿಸುತ್ತದೆ.

ಕಾರಕಾಂಶದಿಂದ ಚತುರ್ಥದಲ್ಲಿ ಕುಜಕೇತುಗಳಿದ್ದರೆ ಜಾತಕನಿಗೆ ಇಟ್ಟಿಗೆಯಿಂದ ನಿರ್ಮಿತ ಗೃಹ ಲಭಿಸುತ್ತದೆ.

ಕಾರಕಾಂಶದಿಂದ ಚತುರ್ಥದಲ್ಲಿ ಗುರು ಇದ್ದರ ಜಾತಕನಿಗೆ ಮರಮುಟ್ಟು ಅಧಿಕ ಇರುವ ಗೃಹ ಲಭಿಸುತ್ತದೆ.

**ತಾರ್ಣಂ ತು ರವಿಣಾ ಪ್ರೋಕ್ತಂ ಜಾತಸ್ಯ ಭವನಂ ದ್ವಿಜ! ।**
**ಚಂದ್ರೇ ತ್ವನಾವೃತೇ ದೇಶೇ ಪತ್ನಿಯೋಗ: ಪ್ರಜಾಯತೇ ॥ ೨೨೧ ॥**

ಕಾರಕಾಂಶದಿಂದ ಚತುರ್ಥದಲ್ಲಿ ರವಿ ಇದ್ದರೆ ಜಾತಕನಿಗೆ ಹುಲ್ಲಿನ ಛಾವಣಿಯ ಗೃಹ ಲಭಿಸುತ್ತದೆ.

ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರನಿದ್ದರೆ ಜಾತಕನು ವಿಶಾಲವಾದ ಸ್ಥಳದಲ್ಲಿ ನೂತನ ಗೃಹ ನಿರ್ಮಿಸಿ ಪತ್ನಿಯೊಂದಿಗೆ ವಾಸಿಸುತ್ತಾನೆ.

**ಕಾರಕಾಂಶದಿಂದ ಪಂಚಮಸ್ಥಿತ ಗ್ರಹಫಲ:-**

**ಪಂಚಮೇ ಕುಜರಾಹುಭ್ಯಾಂ ಕ್ಷಯರೋಗಸ್ಯ ಸಂಭವಃ ।**
**ರಾತ್ರಿನಾಥೇನ ದೃಷ್ಟಾಭ್ಯಾಂ ನಿಶ್ಚಯೇನ ಪ್ರಜಾಯತೇ ॥೨೨೨॥**

1. ಕಾರಕಾಂಶದಿಂದ ಪಂಚಮದಲ್ಲಿ ಕುಜ-ರಾಹುಗಳು ಇದ್ದರೆ ಜಾತಕನಿಗೆ ಕ್ಷಯರೋಗ ಉಂಟಾಗುವ ಸಂಭವ ಇರುತ್ತದೆ. ಈ ಯೋಗಕ್ಕೆ ಚಂದ್ರನ ದೃಷ್ಟಿ ಇದ್ದರೆ ಖಂಡಿತವಾಗಿ ಕ್ಷಯರೋಗ ಸಂಭವಿಸುತ್ತದೆ.

**ಕುಜದೃಷ್ಟೌ ತು ಜಾತಸ್ಯ ಪಿಟಕಾದಿಗದೋ ಭವೇತ್ ।**
**ಕೇತುದೃಷ್ಟೌ ತು ಗ್ರಹಣೀ ಜಲರೋಗೋಥವಾ ದ್ವಿಜ! ॥೨೨೩॥**

2. ಕಾರಕಾಂಶದಿಂದ ಪಂಚಮದಲ್ಲಿ ಕುಜದೃಷ್ಟಿ ಇದ್ದರೆ ಜಾತಕನಿಗೆ ಕಜ್ಜಿ, ಹುಣ್ಣು ಮೊದಲಾದವು ಸಂಭವಿಸುತ್ತದೆ.

3. ಕಾರಕಾಂಶದಿಂದ ಪಂಚಮದಲ್ಲಿ ಕೇತುದೃಷ್ಟಿ ಇದ್ದರೆ ಜಾತಕನಿಗೆ ಗ್ರಹಣೀ ಅಥವಾ ಜಲರೋಗ ಸಂಭವಿಸುತ್ತದೆ.

**ಸ ರಾಹುಗುಲಿಕೇ ತತ್ರ ಭಯಂ ಕ್ಷುದ್ರವಿಷೋದ್ ಭವಮ್ ।**
**ಬುಧೇ ಪರಮಹಂಸಶ್ಚ ಲಗುಡೀ ವಾ ಪ್ರಜಾಯತೇ ॥೨೨೪॥**

4. ಕಾರಕಾಂಶದಿಂದ ಪಂಚಮದಲ್ಲಿ ರಾಹು-ಗುಳಿಕರಿದ್ದರೆ ಜಾತಕನಿಗೆ ಕ್ಷುದ್ರ ಜಂತುಗಳಿಂದ ಪೀಡೆ ಅಥವಾ ವಿಷಭಯ ಇರುತ್ತದೆ.

5. ಕಾರಕಾಂಶದಿಂದ ಪಂಚಮದಲ್ಲಿ ಬುಧನಿದ್ದರೆ ಜಾತಕನು ಜ್ಞಾನಿ ಅಥವಾ ದಂಡಧಾರಿ ಸನ್ಯಾಸಿ ಆಗುತ್ತಾನೆ.

**ರವೌ ಖಡ್ಗಧರೋ ಜಾತಃ ಕುಜೇ ಕುಂತಾಯುಧೀ ಭವೇತ್ ।**
**ಶನೌ ಧನುರ್ಧರೋ ಜ್ಞೇಯೋ ರಾಹೌ ಚ ಲೋಹಯಂತ್ರವಾನ್ ॥**

6. ಕಾರಕಾಂಶದಿಂದ ಪಂಚಮದಲ್ಲಿ ರವಿ ಇದ್ದರೆ ಜಾತಕನು ಖಡ್ಗಧಾರಿ ಮತ್ತು ಕುಜನಿದ್ದರೆ ಬರ್ಚಿಯನ್ನು ಧರಿಸಿದವನು ಆಗುತ್ತಾನೆ.

7. ಕಾರಕಾಂಶದಿಂದ ಪಂಚಮದಲ್ಲಿ ಶನಿ ಇದ್ದರೆ ಜಾತಕನು ಧನುರ್ಧಾರಿಯು ಆಗುತ್ತಾನೆ. ರಾಹು ಇದ್ದರೆ ಲೋಹದ ಯಂತ್ರಗಳನ್ನು ಉಪಯೋಗಿಸುವವನು ಆಗುತ್ತಾನೆ.

**ಕೇತೌ ಚ ಘಟಿಕಾಯಂತ್ರೀ ಮಾನವೋ ಜಾಯತೇ ದ್ವಿಜ! ।**
**ಭಾರ್ಗವೇ ತು ಕವಿರ್ವಾಗ್ಮೀ ಕಾವ್ಯಜ್ಞೋ ಜಾಯತೇ ಜನಃ ॥ ೨೨೬ ॥**

8. ಕಾರಕಾಂಶದಿಂದ ಪಂಚಮದಲ್ಲಿ ಕೇತು ಇದ್ದರೆ ಜಾತಕನು ಗಡಿಯಾರ ಇತ್ಯಾದಿ ಸೂಕ್ಷ್ಮ ಯಂತ್ರಗಳನ್ನು ತಯಾರಿಸುವವನು ಆಗುತ್ತಾನೆ.

9. ಕಾರಕಾಂಶದಿಂದ ಪಂಚಮದಲ್ಲಿ ಶುಕ್ರನಿದ್ದರೆ ಜಾತಕನು ಕವಿಯು, ವಾಕ್ ಚಾತುರ್ಯ ಉಳ್ಳವನು, ಕಾವ್ಯಗಳನ್ನು ತಿಳಿದವನು ಆಗಿರುತ್ತಾನೆ.

**ಸ್ವಾಂಶೇ ತತ್ಪಂಚಮೇ ವಾಪಿ ಚಂದ್ರೇಜ್ಯಾಭ್ಯಾಂ ಚ ಗ್ರಂಥಕೃತ್ ।**
**ಶುಕ್ರೇಣ ಕಿಂಚಿದೂನೋಽಸೌ ತತೋಪ್ಯಲ್ಪೋ ಬುಧೇನ ಚ ॥**

ಕಾರಕಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಚಂದ್ರಗುರುವು ಇದ್ದರೆ ಜಾತಕನು ಗ್ರಂಥಕರ್ತನು ಆಗುತ್ತಾನೆ. ಶುಕ್ರನಿದ್ದರೆ ಕಮ್ಮಿ ಗ್ರಂಥಗಳನ್ನು, ಬುಧನಿದ್ದರೆ ಮತ್ತೂ ಕಮ್ಮಿ ಗ್ರಂಥಗಳನ್ನು ರಚಿಸುತ್ತಾನೆ.

**ಗುರುಣಾ ಕೇವಲೇನೈವ ಸರ್ವವಿದ್ ಗ್ರಂಥಕೃತ್ ತಥಾ ।**
**ವೇದವೇದಾಂತವಿಚ್ಚಾಪಿ ನ ವಾಗ್ಮೀ ಶಾಬ್ದಿಕೋಽಪಿಸನ್ ॥ ೨೨೮ ॥**

ಕಾರಕಾಂಶದಿಂದ ಪಂಚಮದಲ್ಲಿ ಕೇವಲ ಗುರು ಒಬ್ಬನೇ ಇದ್ದರೆ ಜಾತಕನು ಸರ್ವಜ್ಞನು, ಗ್ರಂಥಕರ್ತನು, ವೇದಾಂತಿಯು ಆಗುತ್ತಾನೆ. ಆದರೆ ವಾಕ್ ಚಾತುರ್ಯ ಇರುವುದಿಲ್ಲ.

**ನೈಯಾಯಿಕಃ ಕುಜೇನಾಸೌ ಜ್ಞೇನ ಮೀಮಾಂಸಕಸ್ತಥಾ ।**
**ಸಭಾಜಡಸ್ತು ಶನಿನಾ ಗೀತಜ್ಞೋ ರವಿಣಾ ಸ್ಮೃತಃ ॥ ೨೨೯ ॥**

ಕಾರಕಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಕುಜ ಇದ್ದರೆ ಜಾತಾಕನು ನ್ಯಾಯಶಾಸ್ತ್ರಗಳನ್ನು ಬಲ್ಲವನು, ಬುಧನಿದ್ದರೆ ವ್ಯಾಕರಣ ಬಲ್ಲವನು ಆಗುತ್ತಾನೆ.

ಕಾರಕಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಶನಿ ಇದ್ದರೆ ಜಾತಕನು ಭಾಷಣ ಮಾಡಲು ಅಸಮರ್ಥನು, ರವಿ ಇದ್ದರೆ ಗೀತೆಗಳನ್ನು ಬಲ್ಲವನು ಆಗುತ್ತಾನೆ.

**ಚಂದ್ರೇಣ ಸಾಂಖ್ಯಯೋಗಜ್ಞ: ಸಾಹಿತ್ಯಜ್ಞಶ್ಚ ಗಾಯಕ: ।**
**ಕೇತುನಾ ಗಣಿತಜ್ಞೋಽಸೌ ರಾಹುಣಾಪಿ ತಥೈವ ಚ ॥ ೨೩೦ ॥**

ಕಾರಕಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಚಂದ್ರನಿದ್ದರೆ ಜಾತಕನು ಸಾಹಿತ್ಯ, ಸಂಗೀತ ಮತ್ತು ಯೋಗಗಳನ್ನು ಬಲ್ಲವನು ಆಗುತ್ತಾನೆ.

ಕಾರಕಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಕೇತು ಅಥವಾ ರಾಹು ಇದ್ದರೆ ಜಾತಕನು ಗಣಿತಜ್ಞನು ಆಗುತ್ತಾನೆ.

**ಸಂಪ್ರದಾಯಸ್ಯಸಿದ್ಧಿ: ಸ್ಯಾತ್ ಗುರುಸಂಬಂಧತೋ ದ್ವಿಜ!**
**ಸ್ವಾಂಶಾದ್ ದ್ವಿತೀಯತ: ಕೇಚಿತ್ ಫಲಮೇವ ವದಂತಿ ಹಿ ॥ ೨೩೧ ॥**

ಮೇಲಿನ ಯೋಗಗಳಿಗೆ ಗುರುವಿನ ಸಂಬಂಧ ಇದ್ದರೆ ಉಪದೇಶ-ಸಿದ್ಧಿ ಲಭಿಸುತ್ತದೆ. ಕಾರಕಾಂಶದ ದ್ವಿತೀಯ ಸ್ಥಾನದಿಂದಲೂ ಈ ಯೋಗಗಳನ್ನು ಚಿಂತಿಸಬೇಕೆಂದು ಕೆಲವರು ಹೇಳುತ್ತಾರೆ.

**ಕಾರಕಾಂಶದಿಂದ ಷಷ್ಠಸ್ಥಿತ ಗ್ರಹಫಲ:-**

**ಸ್ವಾಂಶಾತ್ ಷಷ್ಠಗತೇ ಪಾಪೇ ಕರ್ಷಕೋ ಜಾಯತೇ ಜನ:।**
**ಶುಭಗ್ರಹೇಽಲಸಶ್ಚೇತಿ ತೃತೀಯೇಽಪಿ ಫಲಂ ಸ್ಮೃತಮ್ ॥ ೨೩೨ ॥**

ಕಾರಕಾಂಶದಿಂದ ಷಷ್ಠದಲ್ಲಿ ಪಾಪಗ್ರಹರಿದ್ದರೆ ಜಾತಕನು ಕೃಷಿಕನು ಆಗುತ್ತಾನೆ. ಶುಭಗ್ರಹರಿದ್ದರೆ ಜಾತಕನಲ್ಲಿ ಆಲಸ್ಯತನ ಕಂಡುಬರುತ್ತದೆ. ಆತ್ಮಕಾರಕಾಂಶದಿಂದ ತೃತೀಯದಲ್ಲಿ ಸ್ಥಿತಗ್ರಹರಿಂದಲೂ ಈ ಫಲವನ್ನು ತಿಳಿಯಬೇಕು.

**ಕಾರಕಾಂಶದಿಂದ ಸಪ್ತಮಸ್ಥಿತ ಗ್ರಹಫಲ:-**

**ದ್ಯೂನೇ ಚಂದ್ರಗುರೂಯಸ್ಯ ಭಾರ್ಯಾತಸ್ಯಾಽತಿ ಸುಂದರೀ ।**
**ತತ್ರಕಾಮವತೀ ಶುಕ್ರೇ ಬುಧೇ ಚೈವ ಕಲಾವತೀ ॥ ೨೩೩ ॥**

ಕಾರಕಾಂಶದಿಂದ ಸಪ್ತಮದಲ್ಲಿ ಚಂದ್ರ-ಗುರು ಇದ್ದರೆ ಜಾತಕನ ಪತ್ನಿಯು ಅತ್ಯಂತ ರೂಪವತಿ ಆಗುತ್ತಾಳೆ. ಶುಕ್ರನಿದ್ದರೆ ಪತ್ನಿಯು ಕಾಮಿಯಾಗುತ್ತಾಳೆ. ಬುಧನಿದ್ದರೆ ಕಲಾಕುಶಲಳು ಆಗುತ್ತಾಳೆ.

**ರವೌ ಚ ಸ್ವಕುಲೇ ಗುಪ್ತಾ, ಶನೌ ಚಾಪಿ ವಯೋಽಧಿಕಾ ।**
**ತಪಸ್ವಿನೀ ರುಜಾಢ್ಯಾ ವಾ ರಾಹೌ ಚ ವಿಧವಾ ಸ್ಮೃತಾ ॥ ೨೩೪ ॥**

ಕಾರಕಾಂಶದಿಂದ ಸಪ್ತಮದಲ್ಲಿ ರವಿ ಇದ್ದರೆ ಜಾತಕನ ಪತ್ನಿಯು ತನ್ನ ಕುಟುಂಬದವಳು ಆಗಿರುತ್ತಾಳೆ. ಶನಿ ಇದ್ದರೆ ಪತ್ನಿಯು ಅಧಿಕ ವಯಸ್ಸಿನವಳು, ಅಥವಾ ವೈರಾಗಿಣಿಯು, ಅಥವಾ ರೋಗ ಪೀಡಿತಳೂ ಆಗುತ್ತಾಳೆ. ರಾಹು ಇದ್ದರೆ ವಿಧವೆಯು ಪತ್ನಿ ಆಗುತ್ತಾಳೆ.

**ಕಾರಕಾಂಶದಿಂದ ಅಷ್ಟಮಸ್ಥಿತ ಗ್ರಹಫಲ:-**

**ಶುಭಸ್ವಾಮಿಯುತೇ ರಂಧ್ರೇ ಸ್ವಾಂಶಾದ್ ದೀರ್ಘಾಯುರುಚ್ಯತೇ ।**
**ಪಾಪೇಕ್ಷಿತಯುತೇಲ್ಪಾಯುರ್ಮಧ್ಯಾಯುರ್ಮಿಶ್ರದೃಗ್‌ಯುತೇ ॥**

ಕಾರಕಾಂಶದಿಂದ ಅಷ್ಟಮದಲ್ಲಿ ಶುಭಗ್ರಹರಿದ್ದರೆ ಅಥವಾ ಆರಾಷ್ಟಾಧಿಪನು ಇದ್ದರೆ ಅಥವಾ ನೋಡಲ್ಪಟ್ಟರೆ ಜಾತಕನು ದೀರ್ಘಾಯು ಆಗುತ್ತಾನೆ ಪಾಪಗ್ರಹರಿಂದ ದೃಷ್ಟ ಅಥವಾ ಯುತನಾದರೆ ಅಲ್ಪಾಯು ಆಗುತ್ತಾನೆ. ಶುಭಾಶುಭ ಗ್ರಹರಿಂದ ದೃಷ್ಟನಾದರೆ ಜಾತಕನು ಮಧ್ಯಮಾಯುವು ಆಗುತ್ತಾನೆ.

**ಕಾರಕಾಂಶದಿಂದ ನವಮಸ್ಥಿತ ಗ್ರಹಫಲ:-**

**ಕಾರಕಾಂಶಾಚ್ಚ ನವಮೇ ಶುಭಗ್ರಹಯುತೇಕ್ಷಿತೇ ।**
**ಸತ್ಯವಾದೀ ಗುರೌ ಭಕ್ತಃ ಸ್ವಧರ್ಮನಿರತೋ ನರಃ ॥ ೨೩೬ ॥**

ಕಾರಕಾಂಶದಿಂದ ನವಮದಲ್ಲಿ ಶುಭಗ್ರಹರ ದೃಷ್ಟಿ ಅಥವಾ ಯುತಿ ಇದ್ದರೆ ಜಾತಕನು ಸತ್ಯವಂತನು, ಗುರುಹಿರಿಯರನ್ನು ಪೂಜಿಸುವವನು, ಸ್ವಧರ್ಮದಲ್ಲಿ ನಿರತನು ಆಗುತ್ತಾನೆ.

**ಸ್ವಾಂಶಾಚ್ಚ ನವಮೇ ಭಾವೇ ಪಾಪಗ್ರಹಯುತೇಕ್ಷಿತೇ ।**
**ಸ್ವಧರ್ಮ ನಿರತೆ ಬಾಲ್ಯೇ ಮಿಥ್ಯಾವಾದೀ ಚ ವಾರ್ಧಕೇ ॥ ೨೩೭ ॥**

ಕಾರಕಾಂಶದಿಂದ ನವಮದಲ್ಲಿ ಪಾಪಗ್ರಹರ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ಬಾಲ್ಯ ಪ್ರಾಯದಲ್ಲಿ ತನ್ನ ಧರ್ಮವನ್ನು ಅನುಸರಿಸುತ್ತಾನೆ. ಆದರೆ ವಾರ್ಧಕ್ಯದಲ್ಲಿ ಮಿಥ್ಯಾವಾದಿ ಆಗುತ್ತಾನೆ.

**ನವಮೇ ಕಾರಕಾಂಶಾಚ್ಚ ಶನಿರಾಹುಯುತೇಕ್ಷಿತೇ ।ಗುರುದ್ರೋಹಿ ಭವೇದ್ ಬಾಲಃ ಶಾಸ್ತ್ರೇಷು ವಿಮುಖೋ ನರಃ ॥ ೨೩೮ ॥**

ಕಾರಕಾಂಶದಿಂದ ನವಮದಲ್ಲಿ ಶನಿರಾಹುಗಳ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ಗುರುದ್ರೋಹಿಯು, ಶಾಸ್ತ್ರಗಳನ್ನು ಅನುಸರಿಸಿದವನು ಆಗುತ್ತಾನೆ.

**ಕಾರಕಾಂಶಾಚ್ಚ ನವಮೇ ಗುರುಭಾನುಯುತೇಕ್ಷಿತೇ ।**
**ತದಾಪಿ ಗುರುದ್ರೋಹೀ ಸ್ಯಾತ್ ಗುರುವಾಕ್ಯಂನ ಮನ್ಯತೇ ॥**

ಕಾರಕಾಂಶದಿಂದ ನವಮದಲ್ಲಿ ಗುರು ಮತ್ತು ರವಿಯ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ಗುರುವಾಕ್ಯದಂತೆ ನಡೆಯದವನು ಗುರುದ್ರೋಹಿಯು ಆಗುತ್ತಾನೆ.

**ಕಾರಕಾಂಶಾಚ್ಚ ನವಮೇ ಶುಕ್ರಭೌಮಯುತೇಕ್ಷಿತೇ ।**
**ಷಡ್ವರ್ಗಾದಿಕಯೋಗೇ ತು ಮರಣಂ ಪಾರದಾರಿಕಮ್ ॥ ೨೪೦ ॥**

ಕಾರಕಾಂಶಾದಿಂದ ನವಮದಲ್ಲಿ ಶುಕ್ರ-ಕುಜರ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ಅಂತ್ಯಕಾಲದ ವರೆಗೆ ಪರಸ್ತ್ರೀಯರಲ್ಲಿ ಅನುರಕ್ತನು ಆಗಿರುತ್ತಾನೆ.

**ಕಾರಕಾಂಶಾಚ್ಚ ನವಮೇ ಜ್ಞೇಂದುಯುಕ್ತೇಕ್ಷಿತೇ ದ್ವಿಜ! ।ಪರಸ್ತ್ರೀ ಸಂಗಮಾದ್ ಬಾಲೋ ಬಂಧಕೋ ಭವತಿ ಧ್ರುವಮ್ ॥ ೨೪೧ ॥**

ಕಾರಕಾಂಶದಿಂದ ನವಮದಲ್ಲಿ ಬುಧ-ಚಂದ್ರರ ಯುತಿ ಅಥವಾ ದೃಷ್ಟಿಇದ್ದರೆ, ಜಾತಕನು ಪರಸ್ತ್ರೀಸಂಗದಿಂದ ಬಂಧನಕ್ಕೊಳಗಾಗುತ್ತಾನೆ.

**ನವಮೇ ಕೇವಲೇನೈವ ಗುರುಣಾ ಚ ಯುತೇಕ್ಷಿತೇ । ಸ್ತ್ರೀಲೋ-ಲುಪೋ ಭವೇಜ್ಜಾತೋ ವಿಷಯೀ ಚೈವ ಜಾಯತೇ ॥ ೨೪೨ ॥**

ಕಾರಕಾಂಶದಿದ ನವಮದಲ್ಲಿ ಕೇವಲ ಗುರು ಇದ್ದರೆ ಅಥವಾ ಗುರುವಿನ ದೃಷ್ಟಿ ಇದ್ದರೆ ಜಾತಕನು ಸ್ತ್ರೀಲೋಲನು, ಅಧಿಕ ವಿಷಯಾಭಿಲಾಷೆ ಉಳ್ಳವನು ಆಗುತ್ತಾನೆ.

**ಕಾರಕಾಂಶದಿಂದ ದಶಮಸ್ಥಿತ ಗ್ರಹಫಲ:-**

**ಕಾರಕಾಂಶಾಚ್ಚ ದಶಮೇ ಶುಭಖೇಟ ಯುತೇಕ್ಷಿತೇ ।ಸ್ಥಿರವಿತ್ತೋ ಭವೇದ್ ಬಾಲೋ ಗಂಭೀರೋ ಬಲಬುದ್ಧಿಮಾನ್ ॥ ೨೪೩ ॥**

ಕಾರಕಾಂಶದಿಂದ ದಶಮದಲ್ಲಿ ಶುಭಗ್ರಹರ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ಸ್ಥಿರವಾದ ಸಂಪತ್ತುಳ್ಳವನು, ಬಲಿಷ್ಠನು, ಬುದ್ಧಿವಂತನು, ಗಾಂಭೀರ್ಯದಿಂದ ಕೂಡಿದವನು ಆಗುತ್ತಾನೆ.

**ದಶಮೇ ಕಾರಕಾಂಶಾಚ್ಚ ಪಾಪಖೇಟ ಯುತೇಕ್ಷಿತೇ ।**
**ವ್ಯಾಪಾರೇ ಜಾಯತೇ ಹಾನಿ: ಪಿತೃಸೌಖ್ಯೇನ ವರ್ಜಿತ: ॥ ೨೪೪ ॥**

ಕಾರಕಾಂಶದಿಂದ ದಶಮದಲ್ಲಿ ಪಾಪಗ್ರಹರ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ವ್ಯಾಪಾರದಲ್ಲಿ ಹಾನಿಯನ್ನು ಹೊಂದುತ್ತಾನೆ. ಹಾಗೂ ತಂದೆಯ ಸುಖ ಲಭಿಸುವುದಿಲ್ಲ.

**ದಶಮೇ ಕಾರಕಾಂಶಾಚ್ಚ ಬುಧಶುಕ್ರಯುತೇಕ್ಷಿತೇ । ವ್ಯಾಪಾರೇ ಬಹುಲಾಭಶ್ಚ ಮಹತ್ಕರ್ಮ ಕರೋನರ: ॥ ೨೪೫ ॥**

ಕಾರಕಾಂಶದಿಂದ ದಶಮದಲ್ಲಿ ಬುಧ-ಶುಕ್ರರ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನು ವ್ಯಾಪಾರದಲ್ಲಿ ಅತ್ಯಧಿಕ ಲಾಭವನ್ನು ಗಳಿಸುತ್ತಾನೆ. ಮತ್ತು ಮಹತ್ ಕಾರ್ಯಗಳನ್ನು ಸಾಧಿಸುತ್ತಾನೆ.

**ಕಾರಕಾಂಶಾಚ್ಚ ದಶಮೇ ರವಿಚಂದ್ರಯುತೇಕ್ಷಿತೇ । ಗುರುದೃಷ್ಟ-ಯುತೇ ವಿಪ್ರ! ಜಾತಕೋ ರಾಜ್ಯಭಾಗ್ ಭವೇತ್ ॥ ೨೪೬ ॥**

ಕಾರಕಾಂಶದಿಂದ ದಶಮದಲ್ಲಿ ರವಿಚಂದ್ರರ ದೃಷ್ಟಿ ಅಥವಾ ಯುತಿ ಮತ್ತು ಗುರುದೃಷ್ಟಿ ಇದ್ದರೆ ಜಾತಕನು ರಾಜ ಅಥವಾ ರಾಜತುಲ್ಯನು ಆಗುತ್ತಾನೆ.

**ಕಾರಕಾಂಶದಿಂದ ಲಾಭಸ್ಥಿತ ಗ್ರಹಫಲ:-**

**ಸ್ವಾಂಶಾದೇಕಾದಶೇ ಸ್ಥಾನೇ ಶುಭ ಖೇಟ ಯುತೇಕ್ಷಿತೇ ।**
**ಭ್ರಾತೃಸೌಖ್ಯಯುತೋ ಬಾಲ: ಸರ್ವಕಾರ್ಯೇಷು ಲಾಭಕೃತ್ ॥ ೨೪೭ ॥**

ಕಾರಕಾಂಶದಿಂದ ಲಾಭದಲ್ಲಿ ಶುಭಗ್ರಹರ ಯುತಿ ಅಥವಾ ದೃಷ್ಟಿ ಇದ್ದರೆ ಜಾತಕನಿಗೆ ಸಹೋದರರ ಸುಖ ಮತ್ತು ಸಕಲ ಕಾರ್ಯಗಳಲ್ಲಿ ಲಾಭ ಪ್ರಾಪ್ತಿ ಆಗುತ್ತದೆ.

**ಏಕಾದಶೇ ಸಪಾಪೇ ತು ಕುಮಾರ್ಗಾಲ್ಲಾಭಕೃನ್ನರ: । ವಿಖ್ಯಾತೋ ವಿಕ್ರಮೀ ಚೈವ ಜಾಯತೇ ನಾಽತ್ರ ಸಂಶಯ: ॥ ೨೪೮ ॥**

ಕಾರಕಾಂಶದಿಂದ ಏಕಾದಶದಲ್ಲಿ ಪಾಪಗ್ರಹರು ಇದ್ದರೆ ಜಾತಕನು ಅನೀತಿಯ ಮಾರ್ಗದಿಂದ ಲಾಭವನ್ನು ಗಳಿಸುತ್ತಾನೆ. ಜಾತಕನು ಖ್ಯಾತವಂತನು, ಪರಾಕ್ರಮಿಯು ಆಗುತ್ತಾನೆ.

**ಕಾರಕಾಂಶದಿಂದ ವ್ಯಯಸ್ಥಿತ ಗ್ರಹಫಲ:-**

**ಕಾರಕಾಂಶಾದ್ ವ್ಯಯಸ್ಥಾನೇ ಸದ್‌ಗ್ರಹೇ ಸದ್ವ್ಯಯೋ ಭವೇತ್ ।**
**ಅಸದ್ವ್ಯಯೋಶುಭೇ ಜ್ಞೇಯೋ ಗ್ರಹಾಭಾವೇ ಚ ಸತ್ಫಲಮ್ ॥**

ಕಾರಕಾಂಶದಿಂದ ವ್ಯಯಸ್ಥಾನದಲ್ಲಿ ಶುಭಗ್ರಹರಿದ್ದರೆ ಜಾತಕನು ಸದ್ವ್ಯಯ ಮಾಡುವವನು, ಪಾಪಗ್ರಹರಿದ್ದರೆ ಅನಾವ್ಯಯ ಮಾಡುವವನು ಆಗುತ್ತಾನೆ. ಕಾರಕಾಂಶದಿಂದ ವ್ಯಯದಲ್ಲಿ ಗ್ರಹರು ಇಲ್ಲದಿದ್ದರೆ ಶುಭಫಲ ಲಭಿಸುತ್ತದೆ.

**ಕಾರಕಾಂಶಾದ್ ವ್ಯಯಸ್ಥಾನೇ ಸ್ವಭೋಚ್ಚಸ್ಥೇ ಶುಭಗ್ರಹೇ ।**
**ಸದ್‌ಗತಿರ್ಜಾಯತೇ ತಸ್ಯ ಶುಭಲೋಕಮವಾಪ್ನುಯಾತ್ ॥ ೨೫೦ ॥**

ಕಾರಕಾಂಶದಿಂದ ವ್ಯಯಸ್ಥಾನದಲ್ಲಿ ಸ್ವಕ್ಷೇತ್ರ ಅಥವಾ ಉಚ್ಚಸ್ಥ ಶುಭ ಗ್ರಹ ಇದ್ದರೆ ಜಾತಕನಿಗೆ ಸದ್ಗತಿ ಪ್ರಾಪ್ತಿ, ಹಾಗೂ ಸ್ವರ್ಗಾದಿ ಉತ್ತಮ ಲೋಕ ಲಭಿಸುತ್ತದೆ.

**ಕಾರಕಾಂಶಾದ್ ವ್ಯಯೇ ಕೇತೌ ಶುಭಖೇಟಯುತೇಕ್ಷಿತೇ । ತದಾತು ಜಾಯತೇ ಮುಕ್ತಿ: ಸಾಯುಜ್ಯಪದಮಾಪ್ನುಯಾತ್ ॥ ೨೫೧ ॥**

ಕಾರಕಾಂಶದಿಂದ ವ್ಯಯದಲ್ಲಿ ಕೇತುಇದ್ದು ಶುಭದೃಷ್ಟ ಅಥವಾ ಯುತನಾದರೆ ಜಾತಕನು ಮುಕ್ತಿಯನ್ನು ಹೊಂದುತ್ತಾನೆ.

**ರವಿಣಾ ಸಂಯುತೇ ಕೇತೌ ಕಾರಕಾಂಶಾದ್ ವ್ಯಯಸ್ಥಿತೇ ।**
**ಶಿವಭಕ್ತಿರ್ಭವೇತ್ತಸ್ಯ ನಿರ್ವಿಶಂಕಂ ದ್ವಿಜೋತ್ತಮ! ॥ ೨೫೨ ॥**

ಕಾರಕಾಂಶದಿಂದ ವ್ಯಯದಲ್ಲಿ ಕೇತು ಮತ್ತು ರವಿ ಇದ್ದರೆ ಜಾತಕನು ಶಿವಭಕ್ತನು ಆಗುತ್ತಾನೆ.

**ಚಂದ್ರೇಣ ಸಂಯುತೇ ಕೇತೌ ಕಾರಕಾಂಶಾದ್ ವ್ಯಯಸ್ಥಿತೇ ।**
**ಗೌರ್ಯಾಂ ಭಕ್ತಿರ್ಭವೇತ್ತಸ್ಯ ಶಾಕ್ತಿಕೋ ಜಾಯತೇ ನರ: ॥ ೨೫೩ ॥**

ಕಾರಕಾಂಶದಿಂದ ವ್ಯಯದಲ್ಲಿ ಕೇತು-ಚಂದ್ರರು ಇದ್ದರೆ ಜಾತಕನು ಗೌರಿಯ ಭಕ್ತನು, ಶಕ್ತಿದೇವತೆಯ ಆರಾಧಕನು ಆಗುತ್ತಾನೆ.

**ಶುಕ್ರೇಣ ಸಂಯುತೇ ಕೇತೌ ಕಾರಕಾಂಶಾದ್ ವ್ಯಯಸ್ಥಿತೇ ।**
**ಲಕ್ಷ್ಮ್ಯಾಂ ಸಂಜಾಯತೇ ಭಕ್ತಿರ್ಜಾತಕೋಽಸೌ ಸಮೃದ್ಧಿಮಾನ್ ॥**

ಕಾರಕಾಂಶದಿಂದ ವ್ಯಯದಲ್ಲಿ ಕೇತು ಮತ್ತು ಶುಕ್ರನಿದ್ದರೆ ಜಾತಕನು ಲಕ್ಷ್ಮೀ ಆರಾಧಕನು ಧನಸಂಪತ್ತಿನಿಂದ ಅಭಿವೃದ್ಧಿ ಹೊಂದುವವನು ಆಗುತ್ತಾನೆ

**ಕುಜೇನ ಸಂಯುತೇ ಕೇತೌ ಸ್ಕಂದಭಕ್ತೋ ಭವೇನ್ನರಃ ।**
**ವೈಷ್ಣವೋ ಬುಧಸೌರಿಭ್ಯಾಂಗುರುಣಾ ಶಿವಭಕ್ತಿಮಾನ್ ॥ ೨೫೫ ॥**

ಕಾರಕಾಂಶದಿಂದ ವ್ಯಯದಲ್ಲಿ ಕೇತು-ಕುಜರು ಇದ್ದರೆ ಜಾತಕನು ಸುಬ್ರಹ್ಮಣ್ಯನ ಆರಾಧಕನು ಆಗುತ್ತಾನೆ.

ಕಾರಕಾಂಶದಿಂದ ವ್ಯಯದಲ್ಲಿ ಕೇತು, ಬುಧ-ಶನಿ-ಇದ್ದರೆ ಜಾತಕನು ವಿಷ್ಣುಭಕ್ತನು, ಕೇತು-ಗುರು ಇದ್ದರೆ ಶಿವಭಕ್ತನು ಆಗುತ್ತಾನೆ.

**ರಾಹುಣಾ ತಾಮಸೀಂ ದುರ್ಗಾಂ ಸೇವತೇ ಕ್ಷುದ್ರದೇವತಾಮ್ ।**
**ಭಕ್ತಿಃ ಸ್ಕಂದೇಽಥ ಹೇರಂಬೇ ಶಿಖಿನಾ ಕೇವಲೇನ ವಾ ॥ ೨೫೬ ॥**

ಕಾರಕಾಂಶದಿಂದ ವ್ಯಯದಲ್ಲಿ ರಾಹು ಮಾತ್ರ ಇದ್ದರೆ ಜಾತಕನು ದುರ್ಗಾಭಕ್ತನು ಅಥವಾ ತಾಮಸಿಕ ಶಕ್ತಿಗಳ ಆರಾಧಕನು ಆಗುತ್ತಾನೆ. ಕಾರಕಾಂಶದಿಂದ ವ್ಯಯದಲ್ಲಿ ಕೇತು ಮಾತ್ರ ಇದ್ದರೆ ಜಾತಕನು ಸುಬ್ರಹ್ಮಣ್ಯ ಅಥವಾ ಗಣಪತಿಯ ಆರಾಧಕನು ಆಗುತ್ತಾನೆ.

**ಕಾರಕಾಂಶಾದ್ ವ್ಯಯೇ ಸೌರಿಃ ಪಾಪರಾಶೌ ಯದಾ ಭವೇತ್ ।**
**ತದಾಽಪಿ ಕ್ಷುದ್ರದೇವಸ್ಯ ಭಕ್ತಿಸ್ತಸ್ಯ ನ ಸಂಶಯಃ ॥ ೨೫೭ ॥**

ಕಾರಕಾಂಶದಿಂದ ವ್ಯಯದಲ್ಲಿ ಶನಿಯು ಪಾಪರಾಶಿಯಲ್ಲಿ ಇದ್ದರೆ ಜಾತಕನು ತಾಮ್ಲಸಿಕ ದೇವತೆಗಳ ಅಥವಾ ದೈವಗಳ ಆರಾಧಕನು ಆಗುತ್ತಾನೆ.

**ಮೇಷೇ ಧನುಷಿ ವಾ ಕೇತೌ ಕಾರಕಾಂಶಾದ್ ವ್ಯಯೇಸ್ಥಿತೇ ।**
**ಶುಭಖೇಟೇನ ಸಂದೃಷ್ಟೇ ಸಾಯುಜ್ಯಪದಮಾಪ್ನುಯಾತ್ ॥ ೨೫೮ ॥**

ಮೇಷ ಅಥವಾ ಧನುವಿನ ಕೇತುವು ಕಾರಕಾಂಶದಿಂದ ವ್ಯಯದಲ್ಲಿದ್ದು, ಶುಭಗ್ರಹನಿಂದ ನೋಡಲ್ಪಟ್ಟರೆ ಜಾತಕನು ಮುಕ್ತಿಯನ್ನು ಹೊಂದುತ್ತಾನೆ.

**ವ್ಯಯೇ ಚ ಕೇವಲೇ ಕೇತೌ ಪಾಪಯುಕ್ತೇಕ್ಷಿತೇಪಿ ವಾ ।**
**ನ ತದಾ ಜಾಯತೇ ಮುಕ್ತಿ: ಶುಭಲೋಕ ನ ಪಶ್ಯತಿ ॥ ೨೫೯ ॥**

ಕಾರಕಾಂಶದಿಂದ ವ್ಯಯದಲ್ಲಿ ಕೇವಲ ಕೇತು ಇದ್ದು ಪಾಪಗ್ರಹನಿಂದ ಯುತ ಅಥವಾ ದೃಷ್ಟನಾದರೆ ಜಾತಕನಿಗೆ ಮುಕ್ತಿ ಅಥವಾ ಶುಭಲೋಕ (ಸ್ವರ್ಗಾದಿ) ಪ್ರಾಪ್ತಿ ಆಗುವುದಿಲ್ಲ.

**ಪಾಪರ್ಕ್ಷೇಽಪಿ ಶನೌ ಶುಕ್ರೇ ತದಾಽಪಿ ಕ್ಷುದ್ರಸೇವಕ: ।**
**ಅಮಾತ್ಯಕಾರಕಾತ್ ಷಷ್ಠೇಽಪ್ಯೇವಮೇವ ಫಲಂ ವದೇತ್ ॥ ೨೬೦ ॥**

ಕಾರಕಾಂಶದಿಂದ ವ್ಯಯಸ್ಥಾನದಲ್ಲಿ ಶನಿ-ಶುಕ್ರರಿದ್ದರೆ, ಜಾತಕನು ಕ್ಷುದ್ರ ದೇವತಾ ಗಣಗಳ ಆರಾಧಕನು ಆಗುತ್ತಾನೆ. ಕಾರಕಾಂಶದಿಂದ ವ್ಯಯಸ್ಥಿತ ಗ್ರಹಫಲವನ್ನು ಅಮಾತ್ಯಕಾರಕನ ಷಷ್ಠಸ್ಥಾನದಿಂದಲೂ ಚಿಂತಿಸಬೇಕು.

**ಕಾರಕಾಂಶದಿಂದ ತ್ರಿಕೋಣಸ್ಥಿತ ಗ್ರಹನ ವಿಶೇಷಫಲ:-**

**ಕಾರಕಾಂಶಾತ್ ತ್ರಿಕೋಣಸ್ಥೇ ಪಾಪಖೇಟದ್ವಯೇ ದ್ವಿಜ! ।**
**ಮಾನವೋ ಮಂತ್ರ-ತಂತ್ರಜ್ಞೋ ಜಾಯತೇ ನಾಽತ್ರ ಸಂಶಯಃ ॥**

**ಪಾಪೇನ ವಿಕ್ಷಿತೇ ತತ್ರ ಜಾತೋ ನಿಗ್ರಾಹಕೋ ಭವೇತ್ ।**
**ಶುಭೈರ್ನಿರೀಕ್ಷಿತೇ ತಸ್ಮಿನ್ ನರೋನುಗ್ರಾಹಕೋ ಭವೇತ್ ॥ ೨೬೨ ॥**

1. ಕಾರಕಾಂಶದಿಂದ ತ್ರಿಕೋಣದಲ್ಲಿ ಎರಡು ಪಾಪಗ್ರಹರಿದ್ದರೆ ಜಾತಕನು ನಿ:ಸಂಶಯವಾಗಿ ಮಂತ್ರ-ತಂತ್ರಗಳನ್ನು ಬಲ್ಲವನು ಆಗುತ್ತಾನೆ. 2. ಈ ಯೋಗವು ಪಾಪಗ್ರಹನಿಂದ ನೋಡಲ್ಪಟ್ಟರೆ ಜಾತಕನು ನಿಗ್ರಾಹಕನು (ಮಾರಣ ವಧ, ದಂಡ,) ಮತ್ತು 3. ಶುಭಗ್ರಹರಿಂದ ನೋಡಲ್ಪಟ್ಟರೆ ಹಿತಸಾಧಕನು ಆಗುತ್ತಾನೆ.

**ಶುಕ್ರದೃಷ್ಟೇ ವಿಧೌ ಸ್ವಾಂಶೇ ರಸವಾದೀ ಭವೇನ್ನರ: ।ಬುಧದೃಷ್ಟೇ ಚ ಸದ್ವೈದ್ಯಃ ಸರ್ವರೋಗಹರೋ ಭವೇತ್ ॥ ೨೬೩ ॥**

1. ಕಾರಕಾಂಶಸ್ಥಿತ ಚಂದ್ರನನ್ನು ಶುಕ್ರನು ನೋಡಿದರೆ ಜಾತಕನು ರಸವಿದ್ಯೆ (ವೈದ್ಯಕೀಯದಲ್ಲಿ ರಸವಿಜ್ಞಾನ), 2. ಕಾರಕಾಂಶಸ್ಥಿತ ಚಂದ್ರನನ್ನು ಬುಧನು ನೋಡಿದರೆ, ಸಕಲರೋಗಚಿಕಿತ್ಸೆ ನೀಡುವ ಉತ್ತಮ ವೈದ್ಯನು ಆಗುತ್ತಾನೆ.

**ಶುಕ್ರದೃಷ್ಟೇ ಸುಖೇ ಚಂದ್ರೇ ಪಾಂಡುಶ್ವಿತ್ರೀ ಭವೇನ್ನರ: ।**
**ಭೌಮದೃಷ್ಟೇ ಮಹಾರೋಗಿ ರಕ್ತಪಿತ್ತಾರ್ದಿತೋ ಭವೇತ್ ॥ ೨೬೪ ॥**
**ಕೇತುದೃಷ್ಟೇ ಸುಖೇ ಚಂದ್ರೇ ನೀಲಕುಷ್ಠೀ ಪ್ರಜಾಯತೇ ।**

1. ಕಾರಕಾಂಶದಿಂದ ಚತುರ್ಥದಲ್ಲಿ ಚಂದ್ರನಿದ್ದು, ಶುಕ್ರನಿಂದ ನೋಡಲ್ಪಟ್ಟರೆ ಜಾತಕನಿಗೆ ಶ್ವೇತಕುಷ್ಠರೋಗ, 2. ಈ ಚತುರ್ಥದ ಚಂದ್ರನನ್ನು ಕುಜನು ನೋಡಿದರೆ ರಕ್ತಪಿತ್ತಾದಿ ಮಹಾರೋಗ, ಮತ್ತು 3. ಈ ಚತುರ್ಥದ ಚಂದ್ರನನ್ನು ಕೇತುವು ನೋಡಿದರೆ ನೀಲಕುಷ್ಠರೋಗ ಆಗುತ್ತದೆ.

**ಚತುರ್ಥೇ ಪಂಚಮೇ ವಾಽಪಿ ಸ್ಥಿತೌ ರಾಹು ಕುಜೌ ಯದಿ ॥ ೨೬೫ ॥**
**ಕ್ಷಯರೋಗೋ ಭವೇತ್ ತಸ್ಯ ಚಂದ್ರದೃಷ್ಟ್ಯಾ ತು ನಿಶ್ಚಿತ: ।**

ಕಾರಕಾಂಶದಿಂದ ಚತುರ್ಥ ಅಥವಾ ಪಂಚಮದಲ್ಲಿ ರಾಹು ಅಥವಾ ಕುಜನಿದ್ದರೆ ಕ್ಷಯರೋಗ ಆಗುತ್ತದೆ. ಈ ಯೋಗವನ್ನು ಚಂದ್ರನು ನೋಡಿದರೆ ಖಂಡಿತವಾಗಿ ಕ್ಷಯರೋಗ ಆಗುತ್ತದೆ.

**ಸ್ವಾಂಶಾತ್ ಸುಖೇ ಸುತೇವಾಽಪಿ ಕೇವಲ: ಸಂಸ್ಥಿತ: ಕುಜ: ॥ ೨೬೬ ॥**
**ಪಿಟಕಾದಿರ್ಭವೇತ್ ತಸ್ಯ ತದಾ ರೋಗೋ ನ ಸಂಶಯ: ।**
**ಗ್ರಹಣೀ ಜಲರೋಗೋ ವಾ ತತ್ರ ಕೇತೌ ಸ್ಥಿತೇ ಸತಿ ॥ ೨೬೭ ॥**
**ಸ್ವರ್ಭಾನುಗುಲಿಕೌ ತತ್ರ ವಿಷವೈದ್ಯೋ ವಿಷಾರ್ದಿತ: ।**

1. ಕಾರಕಾಂಶದಿಂದ ಚತುರ್ಥ ಅಥವಾ ಪಂಚಮದಲ್ಲಿ ಕೇವಲ ಕುಜನಿದ್ದರೆ ಜಾತಕನಿಗೆ ಕಜ್ಜಿ, ಹುಣ್ಣು ಇತ್ಯಾದಿ ರೋಗ ನಿ:ಸಂಶಯವಾಗಿ ಆಗುತ್ತದೆ. 2. ಕಾರಕಾಂಶದಿಂದ ಚತುರ್ಥ ಅಥವಾ ಪಂಚಮದಲ್ಲಿ ಕೇತು ಇದ್ದರೆ ಗ್ರಹಣೀ ಅಥವಾ ಜಲರೋಗ ಆಗುತ್ತದೆ. 3. ಕಾರಕಾಂಶದಿಂದ ಚತುರ್ಥ ಅಥವಾ ಪಂಚಮದಲ್ಲಿ ರಾಹು ಅಥವಾ ಗುಳಿಕನಿದ್ದರೆ ಜಾತಕನು ವಿಷವೈದ್ಯನು ಆಗುತ್ತಾನೆ. ಅಥವಾ ವಿಷದಿಂದ ಪೀಡಿಸಲ್ಪಡುತ್ತಾನೆ.

**ಸ್ವಾಂಶಕಾತ್ ಪಂಚಮೇ ಭಾವೇ ಕೇವಲೇ ಸಂಸ್ಥಿತೇ ಶನೌ ॥ ೨೬೮ ॥**

**ಧನುರ್ವಿದ್ಯಾವಿದೋ ಜಾತಾ ಭವಂತ್ಯತ್ರ ನ ಸಂಶಯಃ ।**

ಕಾರಕಾಂಶದಿಂದ ಪಂಚಮಭಾವದಲ್ಲಿ ಕೇವಲ ಶನಿಯು ಇದ್ದರೆ ಜಾತಕನು ನಿಃಸಂಶಯವಾಗಿ ಧನುರ್ವಿದ್ಯೆ ಬಲ್ಲವನು ಆಗುತ್ತಾನೆ.

**ಕೇತೌ ಚ ಕೇವಲೇ ತತ್ರ ಘಟಿಕಾಯಂತ್ರಕಾರಕಃ ॥ ೨೬೯ ॥**
**ಬುಧೇ ಪರಮಹಂಸೋ ವಾ ದಂಡೀ ಭವತಿ ಮಾನವ: ।**
**ಲೋಹಯಂತ್ರೀ ತಥಾ ರಾಹೌ ರವೌ ಖಡ್ಗಧರೋ ಭವೇತ್ ॥**

**ಕೇವಲೇ ಚ ಕುಜೇ ಜಾತ: ಕುಂತಾಸ್ತ್ರಧಾರಕಃ ।**

1. ಕಾರಕಾಂಶದಿಂದ ಪಂಚಮಭಾವದಲ್ಲಿ ಕೇವಲ ಕೇತುವು ಇದ್ದರೆ ಜಾತಕನು ಘಟಿಕಾ ಯಂತ್ರಕಾರನು ಆಗುತ್ತಾನೆ. 2. ಕಾರಕಾಂಶದಿಂದ ಪಂಚಮಭಾವದಲ್ಲಿ ಬುಧನು ಇದ್ದರೆ ಜಾತಕನು ಜ್ಞಾನಿಯು ಅಥವಾ ದಂಡಧರ ಸಂನ್ಯಾಸಿಯು ಆಗುತ್ತಾನೆ. 3. ಕಾರಕಾಂಶದಿಂದ ಪಂಚಮಭಾವದಲ್ಲಿ ರಾಹುವು ಇದ್ದರೆ ಜಾತಕನು ಯಂತ್ರಜ್ಞನು ಆಗುತ್ತಾನೆ. 4. ಕಾರಕಾಂಶದಿಂದ ಪಂಚಮಭಾವದಲ್ಲಿ ರವಿ ಇದ್ದರೆ ಜಾತಕನು ಖಡ್ಗಧರಿಸಿದವನು ಆಗುತ್ತಾನೆ. 5. ಕಾರಕಾಂಶದಿಂದ ಪಂಚಮಭಾವದಲ್ಲಿ ಕೇವಲ ಕುಜನಿದ್ದರೆ ಜಾತಕನು ಕಠಾರಿಯನ್ನು ಧರಿಸಿದವನು ಆಗುತ್ತಾನೆ.

**ಸ್ವಾಂಶೇ ವಾ ಪಂಚಮೇ ಸ್ವಾಂಶಾಚ್ಚಂದ್ರೇಜ್ಯೌ ಸಂಸ್ಥಿತೌ ತದಾ ॥**
**ಗ್ರಂಥಕರ್ತಾ ಬವೇಜ್ಞಾತ: ಸರ್ವವಿದ್ಯಾವಿಶಾರದ: ।**
**ತತ್ರ ದೈತ್ಯಗುರೌ ಕಿಂಚ್ಚಿದೂನ ಗ್ರಂಥಕರೌ ಭವೇತ್ ॥ ೨೭೦ ॥**

**ಬುಧೇ ತತ್ರ ತತೋಽಪ್ಯೂನ ಗ್ರಂಥಕರ್ತಾ ಪ್ರಜಾಯತೇ ।**

1. ಆತ್ಮಕಾರಕ ನವಾಂಶದಲ್ಲಿ ಅಥವಾ ಈ ಕಾರಕಾಂಶದಿಂದ ಪಂಚಮದಲ್ಲಿ ಚಂದ್ರ ಮತ್ತು ಗುರು ಇದ್ದರೆ. ಜಾತಕನು ಗ್ರಂಥಕರ್ತನು ಮತ್ತು ಸಕಲವಿದ್ಯೆಗಳಲ್ಲಿ ನುರಿತವನು ಆಗುತ್ತಾನೆ. 2. ಮೇಲೆ ಹೇಳಲ್ಪಟ್ಟ ಸ್ಥಾನಗಳಲ್ಲಿ ಶುಕ್ರನಿದ್ದರೆ ಜಾತಕನು ಸ್ವಲ್ಪ ಕಮ್ಮಿ ಗ್ರಂಥಗಳನ್ನು ರಚಿಸುತ್ತಾನೆ. 3. ಈ ಸ್ಥಾನಗಳಲ್ಲಿ ಬುಧನಿದ್ದರೆ ಇನ್ನೂ ಕಮ್ಮಿ ಗ್ರಂಥಗಳನ್ನು ರಚಿಸುತ್ತಾನೆ.

**ತತ್ರ ಶುಕ್ರೇ ಕವಿರ್ವಾಗ್ಮೀ ಕಾವ್ಯಜ್ಞಶ್ಚ ಪ್ರಜಾಯತೇ ॥ ೨೭೧ ॥**

**ಸರ್ವವಿದ್ ಗ್ರಾಂಥಿಕೋ ಜೇವೇ ನ ವಾಗ್ಮೀ ಚ ಸಭಾದಿಷು ।**
**ಶಬ್ದಜ್ಞಶ್ಚ ವಿಶೇಷೇಣ ವೇದವೇದಾಂತವಿತ್ ತಥಾ ॥ ೨೭೪ ॥**

**ಸಭಾಜಡೋ ಭವೇದ್ ಬಾಲ ಉಕ್ತಸ್ಥಾನಗತೇ ಶನೌ ।**
**ಮೀಮಾಂಸಕೋ ಭವೇನ್ನೂನ ಮುಕ್ತಸ್ಥಾನಗತೇ ಬುಧೇ ॥ ೨೭೫ ॥**

1. ಆತ್ಮಕಾರಕ ನವಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಶುಕ್ರನು ಇದ್ದರೆ ಜಾತಕನು ಕವಿಯು, ವಾಗ್ಮಿಯು, ಕಾವ್ಯಜ್ಞನು ಆಗುತ್ತಾನೆ. 2. ಆತ್ಮಕಾರಕ ನವಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಗುರುವು ಇದ್ದರೆ ಜಾತಕನು ಸರ್ವಜ್ಞನು, ವ್ಯಾಕರಣವನ್ನು ಬಲ್ಲವನು, ವಾಚಾಳಿತನ ವಿಲ್ಲದೆ ಸಭೆಯಲ್ಲಿ ಮಾತಾಡುವವನು, ಶಬ್ದಶಾಸ್ತ್ರವನ್ನು ಬಲ್ಲವನು, ಹಾಗೂ ವಿಶೇಷವಾಗಿ ವೇದ-ವೇದಾಂತ ಬಲ್ಲವನು ಆಗುತ್ತಾನೆ. 3. ಹೇಳಲ್ಪಟ್ಟ ಈ ಸ್ಥಾನಗಳಲ್ಲಿ ಶನಿ ಇದ್ದರೆ ಜಾತಕನು ಸಭೆ-ಸಮಾರಂಭಗಳಲ್ಲಿ ಚೇಷ್ಟಾಹೀನ ಅಥವಾ ಮಂದಬುದ್ಧಿಯವನು ಆಗುತ್ತಾನೆ. 4. ಹೇಳಲ್ಪಟ್ಟ ಈ ಸ್ಥಾನಗಳಲ್ಲಿ ಬುಧನು ಇದ್ದರೆ ಜಾತಕನು ಮೀಮಾಂಸಕನು ಆಗುತ್ತಾನೆ.

**ಸ್ವಾಂಶೇ ವಾ ಪಂಚಮೇ ಭೌಮೇ ಜಾತೋ ನೈಯಾಯಿಕೋ ಭವೇತ್ ।**
**ಚಂದ್ರೇ ಚ ಸಾಂಖ್ಯಯೋಗಜ್ಞ: ಸಾಹಿತ್ಯಜ್ಞಶ್ಚ ಗಾಯಕ:**

**ರವೌ ವೇದಾಂತವಿಚ್ಚೈವ ಗೀತಜ್ಞಶ್ಚ ಪ್ರಜಾಯತೇ । ಕೇತೌ ಚ ಗಣಿತಜ್ಞ: ಸ್ಯಾಜ್ಜ್ಯೋತಿ ಶಾಸ್ತ್ರ ವಿಶಾರದ: ॥ ೨೭೭ ॥**

**ಸಂಪ್ರದಾಯಸ್ಯ ಸಂಸಿದ್ಧಿರ್ಗುರು ಸಂಬಂಧತೋ ಭವೇತ್ ।**

ಕಾರಕಾಂಶದಲ್ಲಿ ಅಥವಾ ಕಾರಕಾಂಶದಿಂದ ಪಂಚಮದಲ್ಲಿ ಕುಜನಿದ್ದರೆ ಜಾತಕನು ನ್ಯಾಯಶಾಸ್ತ್ರವನ್ನು ಬಲ್ಲವನು ಆಗುತ್ತಾನೆ, ಚಂದ್ರನಾದರೆ ಸಾಂಖ್ಯಾ ಯೋಗಜ್ಞ ಸಾಹಿತ್ಯಜ್ಞನು ಅಥವಾ ಗಾಯಕನು ಆಗುತ್ತಾನೆ, ರವಿಯಾದರೆ ವೇದಾಂತಿಯು ಗೀತಜ್ಞನು ಆಗುತ್ತಾನೆ, ಕೇತು ಆದರೆ ಗಣಿತಜ್ಞನು ಜ್ಯೋತಿ ಶಾಸ್ತ್ರ ವಿಶಾರದವನು ಆಗುತ್ತಾನೆ, ಇಲ್ಲಿ ಹೇಳಿದ ಕಾರಕಾಂಶಯೋಗಗಳು ಗುರು ಸಂಬಂಧದಿಂದ ಫಲಪ್ರದ ಆಗುತ್ತದೆ.

**ದ್ವಿತೀಯೇ ಚ ತೃತೀಯೇ ಚ ಸ್ವಾಂಶಾದೇವಂ ವಿಚಾರಯೇತ್ ॥**
**ಭಾವೇ ಸೂಕ್ಷ್ಮಫಲಂ ಜ್ಞಾತ್ವಾ ಜಾತಕಸ್ಯ ಫಲಂ ವದೇತ್ ।**

**ಕೇತೌ ಸ್ವಾಂಶಾದ್ ದ್ವಿತೀಯೇ ವಾ ತೃತೀಯೇ ಸ್ತಬ್ಧವಾಗ್ ಭವೇತ್ ॥ ೨೭೯ ॥**

**ಪಾಪದೃಷ್ಟೇ ವಿಶೇಷೇಣ ಮಾನವೋ ವಕ್ತುಮಕ್ಷಮ: ।**

ಕಾರಕಾಂಶದಿಂದ ದ್ವಿತೀಯ ಹಾಗೂ ತೃತೀಯದಿಂದಲೂ, ಈ ಫಲಗಳನ್ನು ಚಿಂತಿಸಬೇಕು. ಕಾರಕಾಂಶದಿಂದ ಭಾವಾದಿಫಲಗಳನ್ನು ಸೂಕ್ಷ್ಮವಾಗಿ ತಿಳಿದು ಜಾತಕನಿಗೆ ಹೇಳಬೇಕು. ಕೇತುವು ಕಾರಕಾಂಶದಿಂದ ದ್ವಿತೀಯ ಅಥವಾ ತೃತೀಯದಲ್ಲಿ ಇದ್ದರೆ ಮಾತಿನಲ್ಲಿ ತಡೆ ಇರುತ್ತದೆ. ಪಾಪದೃಷ್ಟಿ ಇದ್ದರೆ ಮಾತಾಡಲು ಅಸಮರ್ಥನು ಆಗುತ್ತಾನೆ.

**ಸ್ವಾಂಶಾಲ್ಲಗ್ನಾತ್ ಪದಾದ್ ವಾಪಿ ದ್ವಿತೀಯಾಷ್ಟಮ ಭಾವಯೋ:**
**ಕೇಮದ್ರುಮ: ಪಾಪಸಾಮ್ಯೇ ಚಂದ್ರದೃಷ್ಟ್ಯಾ ವಿಶೇಷತ: ।**

ಕಾರಕಾಂಶದಿಂದ, ಜನ್ಮಲಗ್ನದಿಂದ ಅಥವಾ ಆರೂಢಲಗ್ನದಿಂದ ದ್ವಿತೀಯ ಮತ್ತು ಅಷ್ಟಮ ಈ ಎರಡರಲ್ಲಿಯೂ, ಪಾಪಗ್ರಹ ಸಾಮ್ಯತೆ ಇದ್ದರೆ ಕೇಮದ್ರುಮಯೋಗ ಆಗುತ್ತದೆ. ಈ ಯೋಗವನ್ನು ಚಂದ್ರನು ನೋಡಿದರೆ ಯೋಗವು ಪ್ರಬಲ ಆಗುತ್ತದೆ.

**ಅತ್ರಾಧ್ಯಾಯೇ ಚ ಯೇ ಯೋಗಾ: ಸಫಲಾ ಕಥಿತಾ ಮಯಾ ॥**
**ಯೋಗಕರ್ತೃ ದಶಾಯಾಂತೇ ಜ್ಞೇಯಾ: ಸರ್ವೇ ಪಲಪ್ರದಾ: ।**
**ಏವಂ ದಶಾಪ್ರದಾದ್ರಾಶೇರ್ದ್ವಿತೀಯಾಷ್ಟಮಯೋ ದ್ವಿಜ: ॥ ೨೮೨ ॥**
**ಗ್ರಹಸಾಮ್ಯೇ ಚ ವಿಜ್ಞೇಯೋ ಯೋಗ: ಕೇಮದ್ರುಮೊಶುಭ: ।**

ಈ ಅಧ್ಯಾಯದಲ್ಲಿ (ಪರಾಶರ ಮುನಿಯಿಂದ) ಹೇಳಲ್ಪಟ್ಟ ಯೋಗಗಳು ಆಯಾದಶಾ ಕಾಲದಲ್ಲಿ ಫಲನೀಡುತ್ತದೆ ಎಂದು ತಿಳಿಯಬೇಕು. ಅದೇ ರೀತಿ ದಶಾಪ್ರದ ರಾಶಿಯಿಂದ ದ್ವಿತೀಯಾಷ್ಟಮದಲ್ಲಿ ಗ್ರಹಸಾಮ್ಯತೆ ಇದ್ದರೆ ಅದು ಕೇಮದ್ರುಮ ಎಂಬ ಅಶುಭಯೋಗ ಆಗುತ್ತದೆ.

**ದಶಾಪ್ರಾರಂಭ ಸಮಯೇ ಸಲಗ್ನಾನ್ ಸಾಧಯೇದ್ ಗ್ರಹಾನ್ ॥**
**ಜ್ಞೇಯಸ್ತತ್ರಾಪಿ ಯೋಗೋಽಯಂ ಪಾಪಸಾಮ್ಯೇಽಥರಂಧ್ರಯೋಃ**
**ಏವಂ ತನ್ವಾದಿಭಾವಾನಾಂ ಸೂರ್ಯಾದೀನಾಂ ನಭಃ ಸದಾಮ್ ॥**

**ತತ್ತತ್‌ಸ್ಥಿತ್ಯನುಸಾರೇಣ ಫಲಂ ವಾಚ್ಯಂ ವಿಪಶ್ಚಿತಾ ।**
**ಇತಿ ಸಂಕ್ಷೇಪತಃ ಪ್ರೋಕ್ತಂ ಕಾರಕಾಂಶಫಲಂ ಮಯಾ ॥ ೨೮೫ ॥**

ದಶಾಪ್ರಾರಂಭಕಾಲದ ಲಗ್ನ ಮತ್ತು ಗ್ರಹರ ಕುಂಡಲಿಯನ್ನು ತಯಾರಿಸಿ ಆ ಕಾಲದಲ್ಲಿರುವ ಯೋಗಾದಿಗಳನ್ನು ಮತ್ತು ದ್ವಿತೀಯ-ಅಷ್ಟಮದ ಗ್ರಹ ಸಾಮ್ಯತೆಯನ್ನು ತಿಳಿಯಬೇಕು. ಈ ರೀತಿ ಲಗ್ನಾದಿ ಭಾವಸ್ಥಿತ ಸೂರ್ಯಾದಿ ಗ್ರಹಸ್ಥಿತಿಯಿಂದ ಫಲಾಫಲ ನಿರ್ಣಯಿಸಬೇಕು.

ಇದು ಪರಾಶರಮುನಿಯಿಂದ ಸಂಕ್ಷೇಪವಾಗಿ ಹೇಳಲ್ಪಟ್ಟ ಕಾರಕಾಂಶ ಫಲ ಆಗಿರುತ್ತವೆ.

-: ০০০ :-